Table of Contents


ರಾಜ್ಯಶಾಸ್ತ್ರ

ಮುನ್ನುಡಿ

ಅಧ್ಯಕ್ಷರ ದಿಟ ನುಡಿ

ಪಠ್ಯಪುಸ್ತಕ ರಚನಾ ಸಮಿತಿ

ಪರಿವಿಡಿ

ಅಧ್ಯಾಯ- 1 ನಮ್ಮ ಭಾರತ ಸಂವಿಧಾನದ ಪರಿಚಯ

ಅಧ್ಯಾಯ- 2 ಪ್ರಸ್ತಾವನೆ (PREAMBLE)

ಅಧ್ಯಾಯ- 3 ಮೂಲಭೂತ ಹಕ್ಕುಗಳು ಮತ್ತು ಕರ್ತವ್ಯಗಳು (FUNDAMENTAL RIGHTS AND DUTIES)

ಅಧ್ಯಾಯ- 4 ರಾಜ್ಯ ನೀತಿ ನಿರ್ದೇಶಕ ತತ್ವಗಳು (DIRECTIVE PRINCIPLES OF STATE POLICY)

ಅಧ್ಯಾಯ- 5 ಕೇಂದ್ರ ಕಾರ್ಯಾಂಗ (UNION EXECUTIVES)

ಅಧ್ಯಾಯ- 6 ಕೇಂದ್ರ ಶಾಸಕಾಂಗ (UNION LEGISLATURE)

ಅಧ್ಯಾಯ- 7 ಸರ್ವೋಚ್ಛ ನ್ಯಾಯಾಲಯ (SUPREME COURT)

ಅಧ್ಯಾಯ- 8 ರಾಜ್ಯ ಕಾರ್ಯಾಂಗ (STATE EXECUTIVE)

ಅಧ್ಯಾಯ- 9 ರಾಜ್ಯಶಾಸಕಾಂಗ (STATE LEGISLATURE)

ಅಧ್ಯಾಯ- 10 ಉಚ್ಛ ನ್ಯಾಯಾಲಯ (HIGH COURT)

ಅಧ್ಯಾಯ- 11 ಸ್ಥಳೀಯ ಸರ್ಕಾರಗಳು (Local Self Governments)

ಅಧ್ಯಾಯ- 12 ಸಾರ್ವಜನಿಕ ಲೋಕಸೇವಾ ಆಯೋಗಗಳು (PUBLIC SERVICE COMMISSION)

ಮಾದರಿ ಪ್ರಶ್ನೆಪತ್ರಿಕೆ

ಕರ್ನಾಟಕ ಸರ್ಕಾರ

# ರಾಜ್ಯಶಾಸ್ತ್ರ

ನಮ್ಮ ಭಾರತದ ಸಂವಿಧಾನ

ಹತ್ತನೆಯ ತರಗತಿ- ೨೦೧೫

ಕರ್ನಾಟಕ ಪಠ್ಯಪುಸ್ತಕ ಸಂಘ (ರಿ)

100 ಅಡಿ ವರ್ತುಲ ರಸ್ತೆ, ಬನಶಂಕರಿ 3 ನೇ ಹಂತ,

ಬೆಂಗಳೂರು- 85.

**ಮಿತ್ರ ಜ್ಯೋತಿ ಡಿಜಿಟಲ್ ಲೈಬ್ರರಿ**

**ಮಿತ್ರ ಜ್ಯೋತಿ**

ಸಿ. ಎ. ಸೈಟ್ ನಂ. ಪಿ- 22, 18 ನೇ ಅಡ್ಡರಸ್ತೆ, 31 ನೇ ಮುಖ್ಯರಸ್ತೆ,

ಸೆಕ್ಟರ್- 1, ನಿಫ್ಟ್‌ನ ಹಿಂಭಾಗ, ಹೆಚ್. ಎಸ್. ಆರ್. ಲೇಔಟ್,

ಬೆಂಗಳೂರು- 5 6 0 1 0 2

+91 ಕಂಟ್ರಿ ಕೋಡ್: 80 ಸಿಟಿ ಕೋಡ್

ದೂರವಾಣಿ ಸಂಖ್ಯೆ: 2 2 5 8 7 6 2 3/ 2 2 5 8 7 6 2 5

ಈ- ಮೇಲ್: mj.tblibrary@gmail.com

ವೆಬ್ ಸೈಟ್: www.mitrajyothi.org

560 102. ದೂರವಾಣಿ ಸಂಖ್ಯೆ – 22587623/ 22587625 (ಭಾರತದ ಕೋಡ್: +91, ಬೆಂಗಳೂರಿನ ಕೋಡ್: 080). ಈ-ಮೇಲ್ ವಿಳಾಸ: mj.tblibrary@gmail.com; ವೆಬ್ಸೈಟ್: www.mitrajyothi.org

## ಮುನ್ನುಡಿ

ಪ್ರೌಢಶಾಲೆಯಲ್ಲಿ ಅಭ್ಯಾಸ ಮಾಡುತ್ತಿರುವ ವಿಭಿನ್ನ ಸಾಮರ್ಥ್ಯವುಳ್ಳ/ ಅಂಧ ವಿದ್ಯಾರ್ಥಿಗಳಿಗೆ ವಿಜ್ಞಾನ ಮತ್ತು ಗಣಿತ ವಿಷಯಗಳಿಗೆ ಬದಲಾಗಿ ವಿದ್ಯಾರ್ಥಿಗಳು ಇಚ್ಛೆಪಟ್ಟಲ್ಲಿ, ಐದು ವಿಷಯಗಳನ್ನು ಸೂಚಿಸಿ, ಎರಡು ವಿಷಯಗಳಗನ್ನು ಆರಿಸಿಕೊಳ್ಳುವ ಅವಕಾಶವನ್ನು ಒದಗಿಸಲಾಗಿದೆ. ಈ ಐದು ವಿಷಯಗಳಲ್ಲಿ ರಾಜ್ಯಶಾಸ್ತ್ರ ವಿಷಯವೂ ಒಂದಾಗಿದೆ. 2015 ರಲ್ಲಿ ಹತ್ತನೇ ತರಗತಿಯ ಪಠ್ಯಪುಸ್ತಕವನ್ನು ರಚಿಸಿ, ಜಾರಿಗೆ ತರಲಾಗಿದೆ. ಎಂಟನೆಯ ಹಾಗೂ ಒಂಭತ್ತನೆಯ ತರಗತಿಗಳಿಗೂ ಪಠ್ಯಪುಸ್ತಕ ರಚನಾ ಕಾರ್ಯವು ತ್ವರಿತವಾಗಿ ನಡೆಯುತ್ತಿದ್ದು, ಮುಂದಿನ ವರ್ಷಗಳಲ್ಲಿ ಜಾರಿಗೆ ತರಲು ತೀರ್ಮಾನಿಸಲಾಗಿದೆ.

ಭಾರತೀಯ ರಾಜ್ಯಶಾಸ್ತ್ರ ವಿಷಯದಲ್ಲಿ ಹತ್ತನೇ ತರಗತಿಗೆ ನಮ್ಮ ಭಾರತದ ಸಂವಿಧಾನ ಈ ಶೀರ್ಷಿಕೆಯಡಿಯಲ್ಲಿ ವ್ಯಾಪಕವಾಗಿರುವ ಕಲಿಕಾಂಶಗಳನ್ನು ವಿದ್ಯಾರ್ಥಿಗಳ ಶೈಕ್ಷಣಿಕಾಭಿವೃದ್ಧಿಯನ್ನು ಗಮನದಲ್ಲಿಟ್ಟುಕೊಂಡು 2005 ರ ರಾಷ್ಟ್ರೀಯ ಪಠ್ಯಕ್ರಮ ಚೌಕಟ್ಟಿನಡಿಯಲ್ಲಿ ಹಾಗೂ ಪಠ್ಯವಸ್ತುವಿಗೆ ಅನುಗುಣವಾಗಿ ವಿಷಯಮಂಡನೆ ಹಾಗೂ ಪ್ರತಿ ಅಧ್ಯಾಯದಲ್ಲಿ ನೀಡಿರುವ ಅಭ್ಯಾಸಗಳು ವಿದ್ಯಾರ್ಥಿಗಳನ್ನು ತಾರ್ಕಿಕ ಆಲೋಚನೆ ಮಾಡುವಂತೆ ಮಾಡಿ, ಚಟುವಟಿಕೆಗಳ ಮೂಲಕ ಜ್ಞಾನ ರಚನೆ ಮತ್ತು ಸಂರಚನೆ ಹಾಗೂ ಪುನರ್‌ರಚನೆ ಮತ್ತು ಸ್ವಕಲಿಕೆಯೊಂದಿಗೆ ಸಾಮರ್ಥ್ಯಗಳನ್ನು ತನ್ನದಾಗಿಸಿಕೊಳ್ಳುವಂತೆ, ನಿತ್ಯ ಜೀವನದಲ್ಲಿನ ಘಟನೆಗಳಿಗೆ ಪರಿಹಾರ ಕಂಡುಕೊಳ್ಳುವ ಜೀವನ ಕೌಶಲಗಳನ್ನು ತನ್ನದಾಗಿಸಿಕೊಳ್ಳುವಂತೆ ಪ್ರೇರೆಪಿಸುವ ಪ್ರಯತ್ನಶೀಲತೆಯೊಂದಿಗೆ ವಿದ್ಯಾರ್ಥಿಗಳ ಸರ್ವಾಂಗೀಣ ವ್ಯಕಿತ್ವ ವಿಕಸನಕ್ಕೆ ಪೂರಕವಾಗಿವೆ. ತನ್ಮೂಲಕ ಅವರನ್ನು ಸ್ವತಂತ್ರ ಭಾರತದ ಸ್ವಸ್ಥ ಸಮಾಜದ ಉತ್ತಮ ಪ್ರಜೆಗಳನ್ನಾಗಿ ಮಾಡುವ ಪ್ರಯತ್ನ ನಡೆದಿದೆ.

ಹನ್ನೆರಡು ಅಧ್ಯಾಯಗಳನ್ನೊಳಗೊಂಡ ಈ ಶೀರ್ಷಿಕೆಯಲ್ಲಿ ವಿಷಯ ಮಂಡನೆಯನ್ನು ಹಂತ ಹಂತವಾಗಿ ಆದಷ್ಟು ಸಂಕ್ಷಿಪ್ತವಾಗಿ, ಸಂಗ್ರಹವಾಗಿ, ಸರಳವಾಗಿ ಪ್ರಸ್ತಾಪಿಸಲಾಗಿದೆ, ವಿದ್ಯಾರ್ಥಿಗಳು ಸುಲಭವಾಗಿ ಅರ್ಥೈಸಿಕೊಳ್ಳುವಂತೆ ರಚಿಸಲಾಗಿದೆ, ಪ್ರತಿ ಅಧ್ಯಾಯದ ಕೊನೆಯಲ್ಲಿ ನೀಡಿರುವ ಅಭ್ಯಾಸಗಳು ಮತ್ತು ಸಲಹಾತ್ಮಕ ಚಟುವಟಿಕೆಗಳನ್ನು ನೀಡುವುದರ ಜೊತೆಗೆ ಪ್ರಚಲಿತ ಅಂಶಗಳಿಗೆ ಆದ್ಯತೆ ನೀಡಿ ಇವುಗಳನ್ನು ಅರ್ಥೈಸಿಕೊಳ್ಳಲು, ಚರ್ಚೆ, ಸಂವಾದ, ಚಟುವಟಿಕೆಗಳಿಗೆ ಅವಕಾಶ ಇರುವಂತೆ ಈ ಪುಸ್ತಕವನ್ನು ಸಿದ್ಧಪಡಿಸಲಾಗಿದೆ.

ಕರ್ನಾಟಕ ಪಠ್ಯಪುಸ್ತಕ ಸಂಘವು ಈ ಪಠ್ಯಪುಸ್ತಕ ತಯಾರಿಕೆಯಲ್ಲಿ ಸಹಕರಿಸಿದ ಸಮಿತಿಯ ಅಧ್ಯಕ್ಷರಿಗೆ, ಸದಸ್ಯರಿಗೆ, ಪರಿಶೀಲಕರಿಗೆ, ಮಾರ್ಗದರ್ಶಕರಿಗೆ, ಪಠ್ಯಪುಸ್ತಕವನ್ನು ಸುಂದರವಾಗಿ ಮುದ್ರಿಸಿ ಮುದ್ರಕರಿಗೆ ಹಾಗೂ ಈ ಕಾರ್ಯದಲ್ಲಿ ಸಹಕರಿಸಿದ ಎಲ್ಲಾ ಮಹನೀಯರಿಗೂ ಕೃತಜ್ಞತೆಗಳನ್ನು ಸಲ್ಲಿಸುತ್ತಾ, ವಿದ್ಯಾರ್ಥಿಗಳಿಗೆ ಯಶಸ್ಸು ಉಂಟಾಗಿ ಉತ್ತಮ ಪ್ರಜೆಗಳಾಗಿ ರೂಪುಗೊಳ್ಳಲೆಂದು ಕರ್ನಾಟಕ ಪಠ್ಯಪುಸ್ತಕ ಸಂಘವು ಆಶಿಸುತ್ತದೆ.

ನಾಗೇಂದ್ರ ಕುಮಾರ್, ವ್ಯವಸ್ಥಾಪಕ ನಿರ್ದೇಶಕರು, ಕರ್ನಾಟಕ ಪಠ್ಯಪುಸ್ತಕ ಸಂಘ, ಬೆಂಗಳೂರು.

## ಅಧ್ಯಕ್ಷರ ದಿಟ ನುಡಿ

ವಿಭಿನ್ನ ಸಾಮರ್ಥ್ಯವುಳ್ಳ/ ಅಂಧ ಮಕ್ಕಳು ಸಹ ಜೀವ ವೈವಿಧ್ಯತೆ ಮತ್ತು ಸಂಸ್ಕೃತಿಯ ಭಾಗವಾಗಿದ್ದಾರೆ. ಅವರನ್ನು ಆತ್ಮವಿಶ್ವಾಸಿಗರನ್ನಾಗಿ ಮತ್ತು ಸ್ವಾವಲಂಭಿಗಳನ್ನಾಗಿಸುವ ಶಕ್ತಿ ಶಿಕ್ಷಣಕ್ಕಿದೆ. ವಿಶೇಷ ಶಿಕ್ಷಣದಿಂದಲೇ ಲೂಯಿ ಬ್ರೈಲ್ ಮತ್ತು ಹೆಲೆನ್ ಕೆಲ್ಲರ್‌ರಂತಹ ದೃಷ್ಟಿರಹಿತ ವ್ಯಕ್ತಿಘನತೆಯನ್ನು ಎತ್ತಿ ಹಿಡಿಯುವ ದೃಷ್ಟಿಯಿಂದ ಅಂಧರೆನ್ನುವ ಬದಲು ದೃಷ್ಟಿ ವಿಶ್ವಾಸಿಗರೆಂದು ಸಂಭೋದಿಸುವುದು ಸೂಕ್ತ. ಕರ್ನಾಟಕದಲ್ಲಿ ವಿಶೇಷ ಶಿಕ್ಷಣಕ್ಕೆ ನೂರಕ್ಕೂ ಅಧಿಕ ವರ್ಷಗಳ ಇತಿಹಾಸವಿದೆ. ವಿಶೇಷ ಶಿಕ್ಷಣದಿಂದ ಲಾಭ ಪಡೆದ ಅನೇಕರು ಸ್ವಯಂ ಪ್ರತಿಭೆ ಸಾಮರ್ಥ್ಯಗಳಿಂದ ಸಂಪದ್ಭರಿತ ವ್ಯಕ್ತಿಗಳಾಗಿ ಸಮಾಜಕ್ಕೆ ಪ್ರಯೋಜನಕಾರಿಯಾಗಿದ್ದಾರೆ. ವಿವಿಧ ಕ್ಷೇತ್ರಗಳಲ್ಲುಂಟಾದ ಮುನ್ನಡೆಯಿಂದಾಗಿ ಸಮಾಜ ವಿಜ್ಞಾನಗಳಲ್ಲಿಯೂ ಅಭೂತಪೂರ್ವ ಬದಲಾವಣೆಗಳುಂಟಾಗಿವೆ. ಕಾಲದೇಶಗಳ ಅಗತ್ಯತೆ ಮತ್ತು ಚಿಂತನೆಗಳಿಗೆ ಅನುಗುಣವಾಗಿ ಬದಲಾಗುವ ವಿಷಯ ಜ್ಞಾನವನ್ನು ನೀಡುವುದೇ ಶಿಕ್ಷಣದ ಪರಮೋಚ್ಛ ಗುರಿ. ಇದನ್ನರಿತ ಸಮುದಾಯದೊಳಗಿನ ಹಾಗೂ ಹೊರಗಿನ ಹಿತೈಷಿಗಳು ನೂತನ ಪಠ್ಯವಸ್ತುವಿನ ರಚನೆಗಾಗಿ ಆಗ್ರಹಿಸಿದ್ದು ಸಮಯೋಚಿತವಾದುದಾಗಿದೆ. ಕರ್ನಾಟಕ ಶಿಕ್ಷಣ ವ್ಯವಸ್ಥೆಯ ಪ್ರಜ್ಞಾಚಕ್ಷುಗಳಂತಿರುವ ಡಿ. ಎಸ್. ಇ. ಆರ್. ಟಿ. ಮತ್ತು ಕರ್ನಾಟಕ ಪಠ್ಯಪುಸ್ತಕ ಸಂಘಗಳು ಆಗ್ರಹ ಪೂರ್ವಕ ಬೇಡಿಕೆಗೆ ಸಕಾರಾತ್ಮವಾಗಿ ಸ್ಪಂದಿಸುತ್ತಿವೆ. ದೃಷ್ಟಿವಿಶ್ವಾಸಿಗರ ವಿಭಿನ್ನ ಸಾಮರ್ಥ್ಯವುಳ್ಳ/ ಶೈಕ್ಷಣಿಕ ಸಂವರ್ಧನೆಯ ಹಕ್ಕಿಗೂ ಪುಷ್ಟಿ ನೀಡುತ್ತಿವೆ.

ರಾಜ್ಯ ಮತ್ತು ಸರಕಾರಗಳಿಗೆ ಸಂಬಂಧಿಸಿದ ಚಿಂತನೆಗಳು, ಚಟುವಟಿಕೆಗಳು, ವ್ಯವಹಾರಗಳು ಮತ್ತು ವಿವಾದಾಂಶಗಳ ವಿಶಿಷ್ಠ ಹಾಗೂ ಗತಿಶೀಲ ಅಧ್ಯಯನವೇ ರಾಜ್ಯಶಾಸ್ತ್ರವಾಗಿದೆ. ಇದರ ಜ್ಞಾನವು ಈ ವಿಶೇಷ ಮಕ್ಕಳಿಗೆ ಅತ್ಯಗತ್ಯವಾಗಿದೆ. ದೃಷ್ಟಿರಹಿತ ಮಕ್ಕಳು ಸಹ ಸ್ವತಂತ್ರವಾಗಿ ವಿಚಾರ ಮಾಡಲು ಜೀವನ ಮೌಲ್ಯವನ್ನು ಅಳವಡಿಸಿಕೊಳ್ಳಲು ಮತ್ತು ಸ್ಪರ್ಧಾತ್ಮಕ ಪರೀಕ್ಷೆಗಳಿಗೆ ತಯಾರಾಗುವಂತೆ ಪ್ರೇರಿಪಿಸಲು ನೂತನ ಪಠ್ಯವಸ್ತುವಿನ ರಚನೆ ಪೂರ್ಣಗೊಂಡಿದೆ. ವಿದ್ಯಾರ್ಥಿಗಳು 8 ನೇ ತರಗತಿಯಲ್ಲಿ ರಾಜ್ಯಶಾಸ್ತ್ರದ ಮೂಲ ಪರಿಕಲ್ಪನೆಗಳನ್ನು, 9 ನೇ ತರಗತಿಯಲ್ಲಿ ರಾಜಕೀಯ ಚಿಂತಕರು ಮತ್ತು ರಾಜಕೀಯ ಸಂಸ್ಥೆಗಳನ್ನು ಮತ್ತು 10 ನೇ ತರಗತಿಯಲ್ಲಿ ಭಾರತದ ಸಂವಿಧಾನವನ್ನು ಅಭ್ಯಾಸ ಮಾಡಬೇಕಾಗುತ್ತದೆ. ಇವರ ಉಜ್ವಲ ಭವಿಷ್ಯದ ಹಿತದೃಷ್ಟಿಯಿಂದ 2015-16 ನೇ ಶೈಕ್ಷಣಿಕ ವರ್ಷದಿಂದಲೇ 10 ನೇ ತರಗತಿಗೆ ನಮ್ಮ ಭಾರತದ ಸಂವಿಧಾನವನ್ನು ಅಭ್ಯಾಸ ಮಾಡಲು ಪರಿಚಯಿಸಲಾಗಿದೆ. ಅಂತರ್ಗತ ವಿಧಾನ (Integrated Approach), ರಚನಾತ್ಮಕ ವಿಧಾನ (Constructive Approach) ಮತ್ತು ಸುರುಳಿಯಾಕಾರದ (Spiral Approach) ವಿಧಾನಗಳನ್ನು ಅನುಸರಿಸಿ ಪಠ್ಯಪುಸ್ತಕವನ್ನು ರಚಿಸಲಾಗಿದೆ.

ಸಂವಿಧಾನದ ಅಧ್ಯಯನಕ್ಕೆ ಅದರದೇ ಆದ ಪ್ರಾಮುಖ್ಯತೆ ಇದೆ. ರಾಷ್ಟ್ರದ ಸರ್ವಶ್ರೇಷ್ಠ ಶಾಸನ ಮತ್ತು ಅಭಿವೃದ್ಧಿಯ ಅಡಿಪಾಯದಂತಿರುವ ಸಂವಿಧಾನ ಜನತೆಯ ಸ್ವಾತಂತ್ರ್ಯ ಮತ್ತು ಪರಮಾಧಿಕಾರದ ಪ್ರತೀಕವಾಗಿದೆ. ಅಮೇರಿಕಾ ಸಂಯುಕ್ತ ಸಂಸ್ಥಾನದ ಅಧ್ಯಕ್ಷರಾಗಿದ್ದ ಥಾಮಸ್ ಜಫರ್‌ಸನ್ ತಮ್ಮ ಪತ್ರವೊಂದರಲ್ಲಿ ಬರೆದಿಟ್ಟ ವಿಚಾರ ಅರ್ಥಗರ್ಭಿತವಾಗಿದೆ. "ಜನತೆಯೇ ಸಮಾಜದ ಅಂತಿಮ ಅಧಿಕಾರದ ಭದ್ರಕೋಶವಾಗಿದ್ದಾರೆ. ತಮ್ಮ

ನಿಯಂತ್ರಣಾಧಿಕಾರವನ್ನು ಚಲಾಯಿಸಲು ಬೇಕಾಗುವಷ್ಟು ಯುಕ್ತಾಯುಕ್ತ ಪರಿಜ್ಞಾನ ಅವರಿಗೆ ಇಲ್ಲವೆಂದು ನಾವು ಭಾವಿಸಿ ಅವರಲ್ಲಿರುವ ಅಧಿಕಾರವನ್ನು ಕಸಿದುಕೊಳ್ಳುವುದೊಂದೇ ಪರಿಹಾರವಲ್ಲ. ಸಂವಿಧಾನಿಕ ಅಧಿಕಾರಗಳ ದುರುಪಯೋಗವಾಗದಂತೆ ಮಾಡಲು ಶಿಕ್ಷಣದಿಂದ ಮಾಹಿತಿ ನೀಡಿ ಜನರ ವಿವೇಚನಾ ಸಾಮರ್ಥ್ಯವನ್ನು ಹೆಚ್ಚಿಸುವುದೊಂದೇ ದೋಷ ಪರಿಹಾರಕ".

ಸಂವಿಧಾನ ರಚನಾ ಸಭೆಯಲ್ಲಿ ಅಧ್ಯಕ್ಷರಾದ ಡಾ. ಬಾಬು ರಾಜೇಂದ್ರಪ್ರಸಾದ್ ಹಾಗೂ ಕರುಡು ಸಮಿತಿಯ ಅಧ್ಯಕ್ಷರಾದ ಡಾ. ಬಿ. ಆರ್. ಅಂಬೇಡ್ಕರ್ ರವರ ನೇತೃತ್ವದಲ್ಲಿ ಸಿದ್ಧಪಡಿಸಿದ ಭಾರತದ ಸಂವಿಧಾನವು ಅತ್ಯಂತ ಮಹತ್ವದ್ದಾಗಿದೆ. ಜಗತ್ತಿನಲ್ಲಿ ಅಂದು ಅಸ್ತಿತ್ವದಲ್ಲಿದ್ದ 60 ಸಂವಿಧಾನಗಳನ್ನು ಹಾಗೂ ಬ್ರಿಟಿಷರ ಆಳಿಕೆಯಲ್ಲಿ ಜಾರಿಗೊಳಿಸಿದ್ದ 1935 ರ ಭಾರತ ಸರ್ಕಾರ ಕಾಯ್ದೆಯನ್ನು ಸಮಗ್ರವಾಗಿ ಅಭ್ಯಾಸಿಸಿ ಭಾರತದ ವೈವಿಧ್ಯಮಯ ಸಾಮಾಜಿಕ ಸ್ಥಿತಿಗತಿಗೆ ಅನುರೂಪವಾಗುವಂತೆ ಸಂವಿಧಾನವನ್ನು ರಚಿಸಿದರು. ಇದರ ರಚನೆಗೆ ತೆಗೆದುಕೊಂಡ ಕಾಲಾವಧಿ 2 ವರ್ಷ, 11 ತಿಂಗಳು ಮತ್ತು 18 ದಿನಗಳು. ಇದಕ್ಕೆ ತಗುಲಿದ ವೆಚ್ಚ 63 ಲಕ್ಷ 96 ಸಾವಿರ ರೂಪಾಯಿಗಳು. ಸ್ವತಂತ್ರ ಭಾರತದ ಸಾರ್ವಭೌಮ, ಜಾತ್ಯಾತೀತ, ಸಮಾಜವಾದಿ, ಪ್ರಜಾಸತ್ತಾತ್ಮಕ ಗಣರಾಜ್ಯದ ಈ ಸಂವಿಧಾನ ಭಾರತೀಯರೆಲ್ಲರ ಹಕ್ಕು ಸ್ವಾತಂತ್ರ್ಯಗಳ ಜೀವಾಳವಾಗಿ ತನ್ನ ಪ್ರಾಮುಖ್ಯತೆಯನ್ನು ಉಳಿಸಿಕೊಂಡಿದೆ. ಜಗತ್ತಿನ ಅನೇಕ ರಾಷ್ಟ್ರಗಳಿಗೂ ಸಹ ಇದು ಮಾದರಿ ಸಂವಿಧಾನವಾಗಿದೆ.

ಕ. ಪ. ಪು. ಸಂ. ದ ವ್ಯವಸ್ಥಾಪಕ ನಿರ್ದೇಶಕರು 2014 ಸೆಪ್ಟಂಬರ್ ತಿಂಗಳಲ್ಲಿ ನಮಗೆ ಏರ್ಪಡಿಸಲಾದ ಕಾರ್ಯಾಗಾರದಲ್ಲಿ ಸೂಕ್ತ ಮಾರ್ಗದರ್ಶನ ನೀಡಿ ರಾಜ್ಯಶಾಸ್ತ್ರ ಪಠ್ಯಪುಸ್ತಕದ ರಚನೆಯ ತುರ್ತು ಅಗತ್ಯತೆಯನ್ನು ಒತ್ತಿ ಹೇಳಿದರು. ಅದನ್ನು ಗಮನದಲ್ಲಿಟ್ಟುಕೊಂಡು ಈ ಪಠ್ಯಪುಸ್ತಕವನ್ನು ರಚಿಸಲಾಗಿದೆ. ಮಕ್ಕಳು ನಮ್ಮ ದೇಶದ ಸಂವಿಧಾನದ ಬಗ್ಗೆ ಹೆಮ್ಮೆ ಪಡುವಂತಹ ಸ್ವಾರಸ್ಯಕರ ಸಂಗತಿಗಳನ್ನು ಒಳಗೊಂಡ 12 ಪರಿಚಯಾತ್ಮಕ ಅಧ್ಯಾಯಗಳನ್ನು ನೀಡಲಾಗಿದೆ. ಮಕ್ಕಳಲ್ಲಿ ನಮ್ಮ ಸಂವಿಧಾನದ ಕುರಿತಾಗಿ ಆಸಕ್ತಿ ಮತ್ತು ಜ್ಞಾನವನ್ನು ಹೆಚ್ಚಿಸುವುದೇ ಈ ಅಧ್ಯಾಯಗಳ ಉದ್ದೇಶವಾಗಿದೆ. ಆದ್ದರಿಂದಲೇ ಕನ್ನಡ ಭಾಷೆಯಲ್ಲಿ ಭಾರತದ ಸಂವಿಧಾನದ ಕುರಿತಾದ ಒಂದು ಕಿರು ಸಂಪನ್ಮೂಲ ಪುಸ್ತಕವಾಗಿದೆಯೆಂದು ಹೇಳಲು ಹೆಮ್ಮೆಯೆನಿಸುತ್ತದೆ. ಪ್ರತಿ ಅಧ್ಯಾಯದ ಆರಂಭದಲ್ಲಿ ಕಲಿಕೆಯ ಉದ್ದೇಶಗಳು ಮತ್ತು ತಜ್ಞರ ಹೇಳಿಕೆಯೊಂದಿಗೆ ವಸ್ತುವಿಷಯದ ಸೂಕ್ಷ್ಮ ಪರಿಚಯವಿದೆ. ಶಿಕ್ಷಕರು ನಿದರ್ಶನಗಳನ್ನು ನೀಡುತ್ತಾ ಅಂತರ್ಗತ, ರಚನಾತ್ಮಕ ಮತ್ತು ಸುರುಳಿಯಾಕಾರದ ವಿಧಾನಗಳನ್ನು ಅನುಸರಿಸುತ್ತಾ ಮಕ್ಕಳನ್ನು ಆಕರ್ಷಿಸಬಹುದು. ಅಧ್ಯಾಯದ ಕೊನೆಯಲ್ಲಿ ದೃಢೀಕರಣಕ್ಕಾಗಿ ಅಭ್ಯಾಸವನ್ನು ಕೊಡಲಾಗಿದೆ. ಮಕ್ಕಳಲ್ಲಿ ಸೃಜನಶೀಲತೆ, ಚಿಂತನಾಶೀಲತೆ ಮತ್ತು ಕೌಶಲ್ಯ ಅಭಿವೃದ್ಧಿಗಾಗಿ ಸಲಹಾತ್ಮಕ ಚಟುವಟಿಕೆಗಳನ್ನು ನೀಡಲಾಗಿದೆ. ಶಿಕ್ಷಕರು ಅವುಗಳನ್ನು ಮಾಡಲು ಮಕ್ಕಳಿಗೆ ಉತ್ತೇಜಿಸಿ, ಮಾರ್ಗದರ್ಶಿಸುವುದು ಉತ್ತಮ. ಮಕ್ಕಳ ಜ್ಞಾನವೃದ್ಧಿಗಾಗಿ ಸ್ವಯಂ ಆಸಕ್ತಿಯಿಂದ ತಿಳಿಯಬೇಕಾದ ಹೆಚ್ಚಿನ ಮಾಹಿತಿಯನ್ನು ಚೌಕದಲ್ಲಿ ನೀಡಲಾಗಿದೆ. ಈ ವಿಷಯಗಳ ಕುರಿತಾಗಿ ಲಿಖಿತ ಅಥವಾ ಮೌಖಿಕ ಪರೀಕ್ಷೆಗಳಲ್ಲಿ ಪ್ರಶ್ನೆಗಳನ್ನು ಕೇಳಲು ಅವಕಾಶವಿರುವುದಿಲ್ಲ. ಪಠ್ಯಪುಸ್ತಕದ ಕೊನೆಯಲ್ಲಿ ಪ್ರಶ್ನೆ ಪತ್ರಿಕೆಯ ನೀಲಿ ನಕ್ಷೆಯನ್ನು (Blue Print of the Question Paper) ಕೊಡಲಾಗಿದೆ. ಅದರ ಆಧಾರದ ಮೇಲೆ ಶಿಕ್ಷಕರು ಸಹ ವಿವಿಧ ಪರೀಕ್ಷೆಗಳಿಗಾಗಿ ಪ್ರಶ್ನೆಪತ್ರಿಕೆಗಳನ್ನು ಸಿದ್ಧಪಡಿಸಿಕೊಳ್ಳಬಹುದು.

ಭೋಧನೆಗೆ ಲಭ್ಯವಿರುವ ಅವಧಿಗಳನ್ನು ಆಧರಿಸಿ ಅಧ್ಯಾಯಗಳನ್ನು ಹಂಚಿಕೆ ಮಾಡಲಾಗಿದೆ. ಪಠ್ಯ ಪುಸ್ತಕವನ್ನು ಸಾಧ್ಯವಿರುವಷ್ಟು ದೋಷ ಮುಕ್ತಗೊಳಿಸಲು ಪ್ರಯತ್ನಿಸಲಾಗಿದೆ. ವಿದ್ಯಾರ್ಥಿಗಳು, ಶಿಕ್ಷಕರು, ಪೋಷಕರು ಹಾಗೂ ಸಾರ್ವಜನಿಕರು ಪುಸ್ತಕದ ಕುರಿತಾದ ಮೆಚ್ಚುಗೆ ಮತ್ತು ಕುಂದು ಕೊರತೆಗಳನ್ನು ಪತ್ರಮುಖೇನ ಸಂಯೋಜಕರಿಗೆ ತಿಳಿಸಿದರೆ ಅವುಗಳನ್ನು ಪರಿಷ್ಕರಣೆಯ ಹಂತದಲ್ಲಿ ಪರಿಗಣಿಸಬಹುದು. ತಮ್ಮ ಸಲಹೆ, ಸೂಚನೆಗಳನ್ನು ಹೃದಯಪೂರ್ವಕವಾಗಿ ಸ್ವಾಗತಿಸುತ್ತೇವೆ.

ಈ ಪಠ್ಯಪುಸ್ತಕ ರಚನಾ ಕಾರ್ಯದಲ್ಲಿ ಹೆಚ್ಚಿನ ಸಹಕಾರ ನೀಡಿದ ಕರ್ನಾಟಕ ಪಠ್ಯಪುಸ್ತಕ ಸಂಘದ ವ್ಯವಸ್ಥಾಪಕ ನಿರ್ದೇಶಕರಿಗೂ, ಸಂಯೋಜಕರಿಗೂ ಮತ್ತಿತರ ಸಿಬ್ಬಂದಿ ವರ್ಗದವರಿಗೂ ನಾವು ಅಭಾರಿಯಾಗಿದ್ದೇವೆ. ರಾಜ್ಯಶಾಸ್ತ್ರ ಪಠ್ಯಪುಸ್ತಕ ರಚನಾ ಸಮಿತಿಯ ಸದಸ್ಯರುಗಳೆಲ್ಲರೂ ತಮ್ಮ ಅಮೂಲ್ಯವಾದ ಜ್ಞಾನಾನುಭವಗಳನ್ನೆಲ್ಲಾ ಪಠ್ಯಪುಸ್ತಕ ರಚನೆಗಾಗಿ ಧಾರೆ ಎರೆದು ಅವಿಸ್ಮರಣೀಯ ಸಹಕಾರ ನೀಡಿದ್ದಾರೆ. ಅವರಿಗೂ, ಪರಿಶೀಲಕರಿಗೂ ಮತ್ತು ಪುಸ್ತಕವನ್ನು ಅಂದವಾಗಿ ಮುದ್ರಿಸಿದವರಿಗೂ ವೈಯಕ್ತಿವಾಗಿ ನಾನು ಮತ್ತು ನನ್ನ ದೃಷ್ಟಿವಿಶೇಷಸಿಗರ ಸಮುದಾಯ ಚಿರಋಣಿಗಳು. ಈ ಪಠ್ಯಪುಸ್ತಕವು ಸಾಮಾನ್ಯ ಲಿಪಿಯೊಂದಿಗೆ ಬ್ರೈಲ್ ಲಿಪಿ ಮತ್ತು ಧ್ವನಿಸುರುಳಿಗಳಲ್ಲಿ ಮುದ್ರಿತವಾಗಿ ದೃಷ್ಟಿವಿಶೇಷಸಿಗರ ದಿಟ್ಟ ಮುನ್ನಡೆಗೆ ನೆರವಾಗಲೆಂದು ಆಶಿಸುತ್ತೇವೆ.

ಡಾ. ಕೃಷ್ಣ ಹೊಂಬಳ್, ಅಧ್ಯಕ್ಷರು, ರಾಜ್ಯಶಾಸ್ತ್ರ ಪಠ್ಯಪುಸ್ತಕ ರಚನಾ ಸಮಿತಿ, ಕ. ಪ. ಪು. ಸಂ. ಬೆಂಗಳೂರು.

## ಪಠ್ಯಪುಸ್ತಕ ರಚನಾ ಸಮಿತಿ

**ಅಧ್ಯಕ್ಷರು:** ಡಾ. ಕೃಷ್ಣ ಹೊಂಬಳ್, ಸಹಾಯಕ ಪ್ರಾಧ್ಯಾಪಕರು, ರಾಜ್ಯಶಾಸ್ತ್ರ ಮತ್ತು ಸಾರ್ವಜನಿಕ ಆಡಳಿತ ಅಧ್ಯಯನ ವಿಭಾಗ, ಮೈಸೂರು ವಿಶ್ವವಿದ್ಯಾನಿಲಯ, ಮಾನಸ ಗಂಗೋತ್ರಿ, ಮೈಸೂರು.

**ಸದಸ್ಯರುಗಳು:** ಶ್ರೀ ವೈ. ರಾಮಕೃಷ್ಣರಾವ್, ರಾಜ್ಯಶಾಸ್ತ್ರ ಉಪನ್ಯಾಸಕರು, ಸರ್ಕಾರಿ ಪದವಿ ಪೂರ್ವ ಕಾಲೇಜು, ಎರ್ಮಾಳು ಬಡಾ, ಉಡುಪಿ.

ಶ್ರೀ ರೇವಣ ಸಿದ್ದಪ್ಪ, ರಾಜ್ಯಶಾಸ್ತ್ರ ಉಪನ್ಯಾಸಕರು, ಬಾಲಕರ ಸರ್ಕಾರಿ ಪದವಿ ಪೂರ್ವ ಕಾಲೇಜು, 18 ನೇ ಕ್ರಾಸ್, ಮಲ್ಲೇಶ್ವರಂ, ಬೆಂಗಳೂರು.

ಶ್ರೀ ಈರಣ್ಣ ಅಂಬಿ, ಸಹಶಿಕ್ಷಕರು ಸರ್ಕಾರಿ ಪ್ರೌಢಶಾಲೆ, ತಡಕೂಡು, ಧಾರವಾಡ ಗ್ರಾಮೀಣ ಜಿಲ್ಲೆ.

ಶ್ರೀ ಎಸ್. ಎಸ್. ದೇವರಾಜು, ಹಿರಿಯ ಸಂಶೋಧಕರು, ರಾಜ್ಯಶಾಸ್ತ್ರ ಮತ್ತು ಸಾರ್ವಜನಿಕ ಆಡಳಿತ ಅಧ್ಯಯನ ವಿಭಾಗ, ಮೈಸೂರು ವಿಶ್ವವಿದ್ಯಾನಿಲಯ, ಮಾನಸ ಗಂಗೋತ್ರಿ, ಮೈಸೂರು.

**ಪರಿಶೀಲಕರು:**

ಪ್ರೊ. ಜಿ. ಟಿ. ರಾಮಚಂದ್ರಪ್ಪ, ಪ್ರಾಧ್ಯಾಪಕರು, ರಾಜ್ಯಶಾಸ್ತ್ರ ಮತ್ತು ಸಾರ್ವಜನಿಕ ಆಡಳಿತ ಅಧ್ಯಯನ ವಿಭಾಗ, ಮೈಸೂರು ವಿಶ್ವವಿದ್ಯಾನಿಲಯ ಮಾನಸ ಗಂಗೋತ್ರಿ ಮೈಸೂರು.

**ಸಲಹೆ ಮತ್ತು ಮಾರ್ಗದರ್ಶನ:** ಶ್ರೀ ನಾಗೇಂದ್ರ ಕುಮಾರ್, ವ್ಯವಸ್ಥಾಪಕ ನಿರ್ದೇಶಕರು, ಕರ್ನಾಟಕ ಪಠ್ಯಪುಸ್ತಕ ಸಂಘ, ಬೆಂಗಳೂರು.

ಶ್ರೀ ಪಾಂಡುರಂಗ, ಉಪನಿರ್ದೇಶಕರು (ಪ್ರಭಾರಿ) ಕರ್ನಾಟಕ ಪಠ್ಯಪುಸ್ತಕ ಸಂಘ, ಬೆಂಗಳೂರು.

**ಕಾರ್ಯಕ್ರಮ ಸಂಯೋಜಕರು:**

ಶ್ರೀಮತಿ. ಎನ್. ಎಸ್. ಸೌಮ್ಯ, ಸಹಾಯಕ ನಿರ್ದೇಶಕರು, ಕರ್ನಾಟಕ ಪಠ್ಯ ಪುಸ್ತಕ ಸಂಘ, ಬೆಂಗಳೂರು.

## ಪರಿವಿಡಿ


| ಅಧ್ಯಾಯ | ಶೀರ್ಷಿಕೆ |
|---|---|
| ಅಧ್ಯಾಯ- 1 | ನಮ್ಮ ಭಾರತ ಸಂವಿಧಾನದ ಪರಿಚಯ |
| ಅಧ್ಯಾಯ- 2 | ಪ್ರಸ್ತಾವನೆ |
| ಅಧ್ಯಾಯ- 3 | ಮೂಲಭೂತ ಹಕ್ಕುಗಳು ಮತ್ತು ಕರ್ತವ್ಯಗಳು |
| ಅಧ್ಯಾಯ- 4 | ರಾಜ್ಯ ನೀತಿ ನಿರ್ದೇಶಕ ತತ್ವಗಳು |
| ಅಧ್ಯಾಯ- 5 | ಕೇಂದ್ರ ಕಾರ್ಯಾಂಗ |
| ಅಧ್ಯಾಯ- 6 | ಕೇಂದ್ರ ಶಾಸಕಾಂಗ |
| ಅಧ್ಯಾಯ- 7 | ಸರ್ವೋಚ್ಚ ನ್ಯಾಯಾಲಯ |
| ಅಧ್ಯಾಯ- 8 | ರಾಜ್ಯ ಕಾರ್ಯಾಂಗ |
| ಅಧ್ಯಾಯ- 9 | ರಾಜ್ಯ ಶಾಸಕಾಂಗ |
| ಅಧ್ಯಾಯ- 10 | ಉಚ್ಚ ನ್ಯಾಯಾಲಯ |
| ಅಧ್ಯಾಯ-11 | ಸ್ಥಳೀಯ ಸರ್ಕಾರ |
| ಅಧ್ಯಾಯ- 12 | ಲೋಕಸೇವಾ ಆಯೋಗಗಳು |
| ಮಾದರಿ ಪ್ರಶ್ನೆ ಪತ್ರಿಕೆ | |

# ಅಧ್ಯಾಯ- 1 ನಮ್ಮ ಭಾರತ ಸಂವಿಧಾನದ ಪರಿಚಯ

(INTRODUCTION TO OUR CONSTITUTION)

## ಕಲಿಕೆಯ ಉದ್ದೇಶಗಳು

1. ಭಾರತದ ಸಂವಿಧಾನ ರಚನೆಯ ಹಿನ್ನಲೆ ಮತ್ತು ಸಂದರ್ಭವನ್ನು ಅರಿತುಕೊಳ್ಳುವುದು.
2. ಸಂವಿಧಾನ ರಚನಾಸಭೆ ಮತ್ತು ಅದರ ಸಮಿತಿಗಳ ಬಗ್ಗೆ ತಿಳಿದುಕೊಳ್ಳುವುದು.
3. ನಮ್ಮ ಸಂವಿಧಾನದ ಮೂಲ ಆಧಾರಗಳ ಬಗ್ಗೆ ಮಾಹಿತಿ ಸಂಗ್ರಹಿಸುವುದು.
4. ನಮ್ಮ ಸಂವಿಧಾನದ ಮುಖ್ಯ ಲಕ್ಷಣಗಳನ್ನು ಮೆಚ್ಚಿಕೊಳ್ಳುತ್ತಾ ಸಂವಿಧಾನದ ಬಗೆಗೆ ಗೌರವ ಭಾವನೆಯನ್ನು ಹೊಂದುವುದು.

'ರಾಜ್ಯ ತನಗಾಗಿ ಆಯ್ಕೆ ಮಾಡಿಕೊಂಡಿರುವ ಜೀವನ ವಿಧಾನವೇ ಸಂವಿಧಾನ' ಅರಿಸ್ಟಾಟಲ್.

'ಮೂಲಭೂತ ರಾಜಕೀಯ ಸಂಸ್ಥೆಗಳ ವ್ಯವಸ್ಥೆ ಹಾಗೂ ಅಧಿಕಾರ ಬಾಂಧವ್ಯದ ಆತ್ಮ ಕಥನವೇ ಸಂವಿಧಾನ' ಹರ್ಮನ್ ಫೈನರ್.

## ಪೀಠಿಕೆ:

ಪ್ರತಿಯೊಂದು ರಾಷ್ಟ್ರದ ಸರ್ಕಾರ ಮತ್ತು ಆಡಳಿತ ವ್ಯವಸ್ಥೆಯು ಕೆಲವೊಂದು ನಿಯಮ ನಿಬಂಧನೆಗಳಿಗೆ ಅನುಗುಣವಾಗಿ ನಡೆಯಬೇಕು, ಇಂತಹ ನಿಯಮಗಳ ಸಮೂಹವೇ ಸಂವಿಧಾನ. ಸಂವಿಧಾನವೇ ರಾಷ್ಟ್ರದ ಆಡಳಿತ ವ್ಯವಸ್ಥೆಗೆ ಮೂಲ ಆಧಾರ. ಜನರನ್ನು ನಿಯಂತ್ರಿಸಲು ಕಾನೂನು ಇರುವಂತೆ, ಸರ್ಕಾರವನ್ನು ನಿಯಂತ್ರಿಸಲು ಸಂವಿಧಾನ ಅವಶ್ಯಕ. "ಸಂವಿಧಾನ ಇಲ್ಲದೆ ಇರುವ ರಾಜ್ಯ ರಾಜ್ಯವೇ ಅಲ್ಲ ಅದೊಂದು ಅರಾಜಕತೆಯ ಪ್ರಭುತ್ವ" ಎಂದು ಚಿಂತಕ ಜೆಲ್ಲಿನೆಕ್ ರವರು ಹೇಳಿರುವುದು ಯಥೋಚಿತವಾಗಿದೆ. ಭಾರತೀಯರಾದ ನಾವು ನಮ್ಮ ದೇಶದ ಸಂವಿಧಾನ ರಚನಾ ಸಭೆಯ ಮೂಲಕ ದೇಶದ ಮೂಲಭೂತ ಕಾನೂನನ್ನು ರೂಪಿಸಿ ಸಮರ್ಪಿಸಿಕೊಂಡಿದ್ದು, 20ನೇ ಶತಮಾನದಲ್ಲಿ ಭಾರತದಲ್ಲಿ ನಡೆದ ಬಹು ಪ್ರಮುಖ ರಾಜಕೀಯ ಘಟನೆಯಾಗಿದೆ.

## ಸಂವಿಧಾನ ಹಿನ್ನಲೆ:

1885 ರಲ್ಲಿ ಸ್ಥಾಪನೆಗೊಂಡ ಭಾರತೀಯ ರಾಷ್ಟ್ರೀಯ ಕಾಂಗ್ರೆಸ್ ಆಶ್ರಯದಲ್ಲಿ ನಡೆದ ರಾಷ್ಟ್ರೀಯ ಚಳುವಳಿಯು ಸ್ವರಾಜ್ಯ ಸ್ಥಾಪನೆಯ ಬೇಡಿಕೆಯನ್ನು ಮುಂದಿಟ್ಟಿತ್ತು ಅಲ್ಲದೆ ಸಂವಿಧಾನ ರಚಿಸಲು ಒಂದು ಸಭೆಯ ಅಗತ್ಯತೆಯನ್ನು ವ್ಯಕ್ತಪಡಿಸಿತು. 1934 ರಲ್ಲಿ ಮನ್ವೇಂದ್ರನಾಥರಾಯ್ ರವರು ಸಂವಿಧಾನ ರಚನಾ ಸಭೆಯನ್ನು ಸ್ಥಾಪಿಸಬೇಕೆಂದು ಬಲವಾಗಿ ಆಗ್ರಹಿಸಿದರು. 1938 ರಲ್ಲಿ ಭಾರತೀಯ ರಾಷ್ಟ್ರೀಯ ಕಾಂಗ್ರೆಸ್ ಪರವಾಗಿ ಜವಾಹರಲಾಲ್ ನೆಹರೂರವರು ಭಾರತೀಯರಿಂದ ಕೂಡಿದ ವಯಸ್ಕ ಮತದಾನದ

ಮೂಲಕ ಆಯ್ಕೆಯಾದ ಸಂವಿಧಾನ ರಚನಾ ಸಭೆಯ ಅಗತ್ಯತೆ ಕುರಿತು ಪ್ರಸ್ತಾಪಿಸಿದರು. 1940 ರ ಬ್ರಿಟೀಷ್ ಸರ್ಕಾರದ ಆಗಸ್ಟ್ ಕೊಡುಗೆಯಲ್ಲಿ ಮತ್ತು 1942 ರ ಕ್ರಿಪ್ ಆಯೋಗದ ಪ್ರಸ್ತಾವನೆಯಲ್ಲಿ ಸಂವಿಧಾನ ರಚನೆಯ ಬೇಡಿಕೆಗೆ ಪುಷ್ಟಿ ದೊರೆಯಿತು. ಅಂತಿಮವಾಗಿ 1946 ರ ಕ್ಯಾಬಿನೆಟ್ ಆಯೋಗದ ಶಿಫಾರಸ್ಸಿನ ಮೇರೆಗೆ ಭಾರತೀಯರ ಬಹುದಿನದ ಸಂವಿಧಾನದ ರಚನೆಯ ಬೇಡಿಕೆ ಈಡೇರಿತು. ಇದರಂತೆ ಸಂವಿಧಾನ ರಚನಾ ಸಭೆಯ ಆಯ್ಕೆಗಾಗಿ 1946 ರ ಜುಲೈ ತಿಂಗಳಲ್ಲಿ ಚುನಾವಣೆಗಳು ನಡೆದವು.

## ಸಂವಿಧಾನದ ಬೆಳವಣಿಗೆ:

1950 ಜನವರಿ 26 ರಂದು ಜಾರಿಗೆ ಬಂದ ನಮ್ಮ ಸಂವಿಧಾನದ ಬೆಳವಣಿಗೆಗೆ ಅನೇಕ ಶಾಸನಗಳು ನೆರವಾಗಿವೆ. ಅವುಗಳಲ್ಲಿ ಅತಿ ಮುಖ್ಯವಾದವುಗಳನ್ನು ಈಗ ತಿಳಿಯೋಣ.

1. **1773 ರ ರೆಗ್ಯೂಲೆಟಿಂಗ್ ಆಕ್ಟ್:** ಬಂಗಾಳದ ಗವರ್ನರ್ ಜನರಲ್ ಹುದ್ದೆಯನ್ನು ಸೃಷ್ಟಿಸಲಾಯಿತು. ಕಲ್ಕತ್ತಾದಲ್ಲಿ ಸರ್ವೋಚ್ಚ ನ್ಯಾಯಾಲಯವನ್ನು ಸ್ಥಾಪಿಸಲಾಯಿತು.
2. **1833 ರ ಸನ್ನದು:** ಬಂಗಾಳದ ಗವರ್ನರ್ ಜನರಲ್ ಹುದ್ದೆಯನ್ನು ಭಾರತದ ಗವರ್ನರ್ ಜನರಲ್ ಎಂದು ಘೋಷಿಸಲಾಯಿತು.
3. **1858 ರ ಶಾಸನ:** ಭಾರತದಲ್ಲಿ ಬ್ರಿಟೀಷ್ ಆಡಳಿತವನ್ನು ನೇರವಾಗಿ ಬ್ರಿಟಿಷ್ ಸಂಸತ್ತು ವಹಿಸಿಕೊಂಡಿತು. ಇದರ ಪರಿಣಾಮವಾಗಿ ಒಬ್ಬರು ಕ್ಯಾಬಿನೆಟ್ ಸಚಿವರು ಹಾಗೂ 15 ಸದಸ್ಯರ ಇಂಡಿಯನ್ ಕೌನ್ಸಿಲ್ ಅಸ್ತಿತ್ವಕ್ಕೆ ಬಂದಿತು. ಭಾರತದ ಗವರ್ನರ್ ಜನರಲ್ ಹುದ್ದೆಯನ್ನು ವೈಸರಾಯ್ ಎಂದು ಮರುನಾಮಕರಣ ಮಾಡಲಾಯಿತು. 1858ರ ವಿಕ್ಟೋರಿಯಾ ರಾಣಿಯ ಘೋಷಣೆ ಭಾರತೀಯರಿಗೆ ಆಶ್ವಾಸನೆಗಳ ಮಹಾಪೂರವನ್ನೇ ಹರಿಸಿತು. ಆದುದರಿಂದ ಇದನ್ನು ಭಾರತದ ಮ್ಯಾಗ್ನಕಾರ್ಟ ಎಂದು ಬಣ್ಣಿಸಲಾಗಿದೆ.
4. **1861 ರ ಶಾಸನ:** ಗವರ್ನರ್ ಜನರಲ್ ರವರ ನಿರ್ದೇಶಕರ ಮಂಡಳಿಯಲ್ಲಿ ಸದಸ್ಯರ ಸಂಖ್ಯೆಯನ್ನು ಹೆಚ್ಚಿಸಿ ಅಧಿಕಾರೇತರ ಸದಸ್ಯರಿಗೆ ಅವಕಾಶ ಕಲ್ಪಿಸಲಾಯಿತು. ಭಾರತದಲ್ಲಿ ಸಂಸದೀಯ ವ್ಯವಸ್ಥೆಗೆ ಇದು ನಾಂದಿಯಾಯಿತು.
5. **1909 ಮಾರ್ಲೆ ಮಿಂಟೋ ಸುಧಾರಣೆಗಳು:** ಇದರನ್ವಯ ಮತೀಯ ಆಧಾರದ ಮೇಲೆ ಮುಸ್ಲಿಮ್ರಿಗೆ ಪ್ರತ್ಯೇಕ ಪ್ರಾತಿನಿಧ್ಯವನ್ನು ಕಲ್ಪಿಸಲಾಯಿತು. ನಿಯಂತ್ರಿತ ಆಚರಣೆ ಪದ್ಧತಿಯನ್ನು ಅನುಷ್ಠಾನಗೊಳಿಸಲಾಯಿತು.
6. **1919 ಮಾಂಟೆಗೊ ಚೆಮ್ಸ್ ಫೊರ್ಡ್ (Chemsford) ಸುಧಾರಣೆ:** ಇದು ಭಾರತ ಸಂವಿಧಾನ ಬೆಳವಣಿಗೆಯ ಮೈಲಿಗಲ್ಲು. ಪ್ರಾಂತ್ಯಗಳಲ್ಲಿ ದ್ವಿಪ್ರಭುತ್ವ ಪದ್ಧತಿ ಜಾರಿ, ಪ್ರಾಂತ್ಯಗಳ ಮೇಲೆ ಕೇಂದ್ರ ಸರ್ಕಾರದ ನಿಯಂತ್ರಣ ಹಾಗೂ ಕ್ರೈಸ್ತರಿಗೆ ಪ್ರತ್ಯೇಕ ಮತದಾನದ ವಿಸ್ತರಣೆ. ಇವು 1919 ರ ಶಾಸನದ ಮುಖ್ಯಾಂಶಗಳು.
7. **1935 ರ ಭಾರತ ಸರ್ಕಾರದ ಕಾಯ್ದೆ:** ಭಾರತ ಸಂವಿಧಾನದಲ್ಲಿರುವ ಸರಿಸುಮಾರು ಪ್ರತಿಶತ ಎಪ್ಪತ್ತೈದರಷ್ಟು ಅಂಶಗಳನ್ನು ಈ ಶಾಸನದಿಂದಲೇ ತೆಗೆದುಕೊಳ್ಳಲಾಗಿದೆ.

ಅವುಗಳಲ್ಲಿ ಮುಖ್ಯವಾದವುಗಳೆಂದರೆ: ಒಕ್ಕೂಟ ಮತ್ತು ಪ್ರಾಂತೀಯ ಸ್ವಯಂ ಅಧಿಕಾರ, ಕೇಂದ್ರದಲ್ಲಿ ದ್ವಿ ಸರ್ಕಾರ ಪದ್ಧತಿ, ಕೇಂದ್ರದಲ್ಲಿ ದ್ವಿ ಸದನ ಶಾಸಕಾಂಗ ಜಾರಿ, ಕೇಂದ್ರ ಹಾಗೂ ಪ್ರಾಂತ್ಯಗಳ ನಡುವೆ ಅಧಿಕಾರ ಹಂಚಿಕೆಗೆ ಸಂಬಂಧಿಸಿದ ಕೇಂದ್ರ ಪಟ್ಟಿ ಮತ್ತು ರಾಜ್ಯ ಪಟ್ಟಿ ಭಾರತದಲ್ಲಿ ರಿಸರ್ವ್ ಬ್ಯಾಂಕ್ ಸ್ಥಾಪನೆ ಇತ್ಯಾದಿ.

8. **1947 ಭಾರತ ಸ್ವಾತಂತ್ರ್ಯ ಕಾಯ್ದೆ:** ಬ್ರಿಟಿಷ್ ಸಂಸತ್ತು ರೂಪಿಸಿದ ಭಾರತ ಸ್ವಾತಂತ್ರ್ಯ ಕಾಯ್ದೆ ಪ್ರಕಾರ ಭಾರತ ಮತ್ತು ಪಾಕಿಸ್ತಾನ ಪ್ರತ್ಯೇಕ ರಾಷ್ಟ್ರಗಳಾಗಿ ಉದಯಿಸಿದವು ಭಾರತ ಸಾರ್ವಭೌಮ ರಾಷ್ಟ್ರವಾಯಿತು. ದೇಶೀಯ ಸಂಸ್ಥಾನಗಳಿಗೆ ಮೂರು ಆಯ್ಕೆಗಳನ್ನು ಕೊಡಲಾಯಿತು. ಅವುಗಳೆಂದರೆ ಭಾರತ ಒಕ್ಕೂಟಕ್ಕೆ ಸೇರುವ ಇಲ್ಲವೆ ಪಾಕಿಸ್ತಾನಕ್ಕೆ ಸೇರುವ ಅಥವಾ ಸ್ವತಂತ್ರವಾಗಿ ಉಳಿಯುವ ನಿರ್ಣಯ ಕೈಗೊಳ್ಳುವ ಅವಕಾಶವನ್ನು ಪಡೆದವು.

## ಸಂವಿಧಾನ ರಚನಾ ಸಭೆ:

ಕ್ಯಾಬಿನೆಟ್ ಆಯೋಗದ ಶಿಫಾರಸ್ಸಿನಂತೆ 389 ಸದಸ್ಯರನ್ನೊಳಗೊಂಡ ಸಂವಿಧಾನ ರಚನಾ ಸಭೆ ಅಸ್ತಿತ್ವಕ್ಕೆ ಬಂದಿತು. ಹತ್ತು ಲಕ್ಷ ಜನತೆಗೆ ಒಬ್ಬರಂತೆ ಸದಸ್ಯರನ್ನು ಆಯ್ಕೆ ಮಾಡಲಾಯಿತು. ಇವರುಗಳಲ್ಲಿ 296 ಸದಸ್ಯರು ಬ್ರಿಟಿಷ್ ಪ್ರಾಂತ್ಯಗಳ ಶಾಸಕರಿಂದ ಪರೋಕ್ಷವಾಗಿ ಚುನಾಯಿತರಾದರು. 93 ಸದಸ್ಯರು ದೇಶೀಯ ಸಂಸ್ಥಾನಗಳಿಂದ ನಾಮಕರಣಗೊಂಡರು. ಉದಾಹರಣೆಗೆ ಮೈಸೂರು ಪ್ರಾಂತ್ಯದಿಂದ 07 ಸದಸ್ಯರು ನಾಮಕರಣಗೊಂಡರು. ಇದರಲ್ಲಿ ಒಟ್ಟು 15 ಮಹಿಳಾ ಸದಸ್ಯರಿದ್ದರು. ಅವರಲ್ಲಿ ಅಜುಲ್ಲಾ ರಸ್ಸುಲ್ಲಾ ಏಕೈಕ ಮುಸ್ಲಿಂ ಮಹಿಳಾ ಸದಸ್ಯರಾಗಿದ್ದರು.

ಸ್ವಾತಂತ್ರ್ಯಾನಂತರ ಸಂವಿಧಾನ ರಚನಾಸಭೆಯು ಸಾರ್ವಭೌಮ ಸಂಸ್ಥೆಯಾಯಿತು. ದೇಶದ ವಿಭಜನೆಯ ಫಲವಾಗಿ ಸದಸ್ಯರ ಸಂಖ್ಯೆಯನ್ನು 299 ಕ್ಕೆ ಇಳಿಸಲಾಯಿತು. ಇವರಲ್ಲಿ 229 ಚುನಾಯಿತ ಸದಸ್ಯರು ಹಾಗೂ 70 ನಾಮಕರಣಗೊಂಡ ಸದಸ್ಯರು ಇದ್ದರು. ಸಂವಿಧಾನ ರಚನಾಸಭೆಯು 1946 ಡಿಸೆಂಬರ್ 9 ರಂದು ಪ್ರಥಮ ಅಧಿವೇಶನವನ್ನು ನಡೆಸಿತು. ಸಚ್ಚಿದಾನಂದ ಸಿನ್ಹಾರವರನ್ನು ಹಂಗಾಮಿ ಅಧ್ಯಕ್ಷರನ್ನಾಗಿ ನೇಮಿಸಲಾಯಿತು. ನಂತರ 1946 ರ ಡಿಸೆಂಬರ್ 11 ರಂದು ಡಾ. ಬಾಬು ರಾಜೇಂದ್ರ ಪ್ರಸಾದ್ ರವರನ್ನು ಖಾಯಂ ಅಧ್ಯಕ್ಷರನ್ನಾಗಿಯು, ಹೆಚ್. ಸಿ. ಮುಖರ್ಜಿಯವರನ್ನು ಉಪಾಧ್ಯಕ್ಷರನ್ನಾಗಿಯೂ ಆಯ್ಕೆ ಮಾಡಲಾಯಿತು. ಬಿ. ಎನ್. ರಾವ್ ರವರು ಸಂವಿಧಾನದ ಶಾಸನಾತ್ಮಕ ಸಲಹೆಗಾರರಾಗಿ ನೇಮಕಗೊಂಡರು. ಸಂವಿಧಾನದ ರಚನಾ ಕಾರ್ಯಕ್ಕಾಗಿ 22 ಪ್ರಮುಖ ಸಮಿತಿಗಳನ್ನು ಹಾಗೂ 5 ಉಪ ಸಮಿತಿಗಳನ್ನು ರಚಿಸಲಾಯಿತು. ಉದಾಹರಣೆಗೆ ಕೇಂದ್ರ ಸಂವಿಧಾನ ಸಮಿತಿ, ಮೂಲಭೂತ ಹಕ್ಕುಗಳ ಸಮಿತಿ ಮತ್ತು ಕರಡುಸಮಿತಿಯೂ ಸಂವಿಧಾನ ರಚನೆಯಲ್ಲಿ ಪ್ರಮುಖ ಪಾತ್ರ ವಹಿಸಿದವು. 1947 ಆಗಸ್ಟ್ 29 ರಂದು ರಚಿತವಾದ ಈ ಕರಡು ಸಮಿತಿಯಲ್ಲಿ ಒಟ್ಟು 7 ಜನ ಸದಸ್ಯರಿದ್ದರು. ಡಾ. ಬಿ. ಆರ್. ಅಂಬೇಡ್ಕರ್ ಈ ಸಮಿತಿಯ ಅಧ್ಯಕ್ಷರಾಗಿದ್ದರು. ಈ ಸಮಿತಿಯ ಸಂವಿಧಾನದ ಕರಡುಪ್ರತಿಯನ್ನು ಸಿದ್ಧ ಪಡಿಸಿತು. ಸಂವಿಧಾನ ರಚನಾ ಸಮಿತಿಯು ಕರಡುಪ್ರತಿಗೆ 7653 ತಿದ್ದುಪಡಿಗಳನ್ನು ಸೂಚಿಸಿತು. ಇವುಗಳಲ್ಲಿ 2473 ತಿದ್ದುಪಡಿಗಳ ಕುರಿತು ಚರ್ಚಿಸಿ ತೀರ್ಮಾನ ಕೈಗೊಳ್ಳಲಾಯಿತು. ಖ್ಯಾತ ಸಂವಿಧಾನ ತಜ್ಞರಾದ ಎಂ. ವಿ. ಪೈಲಿರವರು ಡಾ. ಬಿ. ಆರ್. ಅಂಬೇಡ್ಕರ್ ರವರ ಸೇವೆಯನ್ನು

ಕೊಂಡಾಡುತ್ತಾ ಅವರನ್ನು **ಸಂವಿಧಾನ ಶಿಲ್ಪಿ** ಅಥವಾ **ಸಂವಿಧಾನದ ಪಿತಾಮಹ** ಎಂದು ವರ್ಣಿಸಿದ್ದು ಅವಿಸ್ಮರಣೀಯ.

*ಸಂವಿಧಾನ ರಚನಾ ಕರಡು ಸಮಿತಿಯ ಸದಸ್ಯರು.*

1. ಡಾ. ಬಿ. ಆರ್. ಅಂಬೇಡ್ಕರ್
2. ಅಲ್ಲಾಡಿ ಕೃಷ್ಣಸ್ವಾಮಿ ಅಯ್ಯರ್
3. ಎನ್. ಗೋಪಾಲಸ್ವಾಮಿ ಅಯ್ಯಂಗಾರ್
4. ಕೆ. ಎಂ. ಮುನ್ಷಿ
5. ಮಹಮ್ಮದ್ ಸಾದುಲ್ಲಾಹ
6. ಡಿ. ಪಿ. ಕೇತನ್
7. ಬಿ. ಎಲ್. ಮಿತ್ತರ್.

ಕೇತನ್ ರವರ ಮರಣದ ನಂತರ ಟಿ. ಟಿ. ಕೃಷ್ಣಮಾಚಾರಿಯವರನ್ನು ಮತ್ತು ಬಿ. ಎಲ್. ಮಿತ್ತರ್ ವರ ಅನಾರೋಗ್ಯದ ಕಾರಣದಿಂದಾಗಿ ಎನ್. ಮಾಧವರಾವ್ ರವರನ್ನು ನೇಮಕ ಮಾಡಲಾಯಿತು.

1949 ನವೆಂಬರ್ 26 ರಂದು 284 ಸದಸ್ಯರ ಅಂಕಿತದೊಂದಿಗೆ ಸಂವಿಧಾನ ರಚನಾ ಸಭೆಯು ಸಂವಿಧಾನವನ್ನು ಸ್ವೀಕರಿಸಿತು. 1950 ಜನವರಿ 26 ರಂದು ಭಾರತದ ಸಂವಿಧಾನವನ್ನು ಜಾರಿಗೊಳಿಸಲಾಯಿತು. ಸಂವಿಧಾನ ರಚನಾ ಸಭೆಯು ಇದನ್ನು ರಚಿಸಲು 2 ವರ್ಷ 11 ತಿಂಗಳು 18 ದಿನಗಳ ಕಾಲಾವಕಾಶವನ್ನು ತೆಗೆದುಕೊಂಡಿದೆ. ನಮ್ಮ ಸಂವಿಧಾನದ ಮೇಲೆ ಸುಮಾರು 60 ಇತರ ಸಂವಿಧಾನಗಳ ಪ್ರಭಾವವಿದೆ. ಆದುದರಿಂದ ನಮ್ಮ ಸಂವಿಧಾನವನ್ನು ಎರವಲು ಸಂವಿಧಾನವೆಂದು ಹೇಳಲಾಗಿದೆ.

1. ಸಂಸದೀಯ ಪ್ರಜಾಪ್ರಭುತ್ವ ವ್ಯವಸ್ಥೆ- ಇಂಗ್ಲೆಂಡ್ ಸಂವಿಧಾನ
2. ಮೂಲಭೂತ ಹಕ್ಕುಗಳು ಮತ್ತು ಸ್ವತಂತ್ರ್ಯ ನ್ಯಾಯಾಂಗ ವ್ಯವಸ್ಥೆ- ಅಮೇರಿಕ ಸಂಯುಕ್ತ ಸಂಸ್ಥಾನ.
3. ರಾಜ್ಯ ನೀತಿ ನಿರ್ದೇಶಕ ತತ್ವಗಳು- ಐರ್ಲೇಂಡ್ ಸಂವಿಧಾನ
4. ಸಂವಿಧಾನದ ತಿದ್ದುಪಡಿ ವಿಧಾನ- ದಕ್ಷಿಣ ಆಫ್ರಿಕಾ.
5. ತುರ್ತು ಪರಿಸ್ಥಿತಿ ಅಂಶಗಳು- 1935 ರ ಭಾರತ ಸರ್ಕಾರದ ಸಂವಿಧಾನ.
6. ಸಮವರ್ತಿ ಪಟ್ಟಿ- ಆಸ್ಟ್ರೇಲಿಯಾ ಸಂವಿಧಾನ.
7. ಮೂಲಭೂತ ಕರ್ತವ್ಯಗಳು- ಸೋವಿಯತ್ ರಷ್ಯಾ
8. ಪ್ರಬಲ ಒಕ್ಕೂಟ ವ್ಯವಸ್ಥೆ- ಕೆನಡಾ.

*ಲಕ್ಷಣಗಳು:*

ಭಾರತದ ಸಂವಿಧಾನವು ಕೆಲವು ವಿಶಿಷ್ಟ ಲಕ್ಷಣಗಳನ್ನು ಒಳಗೊಂಡಿದೆ. ಅವುಗಳೆಂದರೆ:

### 1. ಲಿಖಿತ ಮತ್ತು ಬೃಹತ್ ಸಂವಿಧಾನ:

ವಿಶ್ವದ ಸಂವಿಧಾನಗಳಲ್ಲೆಲ್ಲ ಭಾರತದ ಸಂವಿಧಾನವು ಅತ್ಯಂತ ಬೃಹತ್ತಾದ ಲಿಖಿತ ಸಂವಿಧಾನವಾಗಿದೆ. ಇದೊಂದು ಬರಹ ರೂಪದಲ್ಲಿರುವ ವಿವರಣಾತ್ಮಕ ದಾಖಲೆಯಾಗಿದೆ. ಸಂವಿಧಾನ ಜಾರಿಗೆ ಬಂದಾಗ ಭಾಗಗಳು 395 ವಿಧಿಗಳು ಮತ್ತು 8 ಅನುಸೂಚಿಗಳಿದ್ದವು.

ಅನೇಕ ಸಂವಿಧಾನ ತಿದ್ದುಪಡಿಗಳಿಂದ ವಿಧಿಗಳ ಸಂಖ್ಯೆಯಲ್ಲಿ ಏರುಪೇರಾಗಿದೆ. ಕೆಲವು ವಿಧಿಗಳು ರದ್ದಾಗಿವೆ. ಇನ್ನು ಕೆಲವು ವಿಧಿಗಳು ಸೇರ್ಪಡೆಗೊಂಡಿವೆ. ಆದರೆ ಸಂವಿಧಾನದ ಮೊದಲ ಕ್ರಮಸಂಖ್ಯೆಯನ್ನು ಹಾಗೆಯೇ ಉಳಿಸಿಕೊಳ್ಳಲಾಗಿದೆ. 395 ನೇ ವಿಧಿಯೇ ಇಂದಿಗೂ ಸಂವಿಧಾನದ ಕೊನೆಯ ಕ್ರಮಸಂಖ್ಯೆಯಾಗಿದೆ. 2013 ರ ವರೆಗೆ 98 ಸಂವಿಧಾನ ತಿದ್ದು ಪಡಿಗಳಾಗಿವೆ. ಪ್ರಸ್ತುತ (2014) ನಮ್ಮ ಸಂವಿಧಾನದಲ್ಲಿ 25 ಭಾಗಗಳು 465 ವಿಧಿಗಳು 12 ಅನುಸೂಚಿ (ಪರಿಶಿಷ್ಟ) ಗಳಿವೆ. ಇಷ್ಟೊಂದು ವಿಧಿಗಳನ್ನು ಮತ್ತು ಪರಿಶಿಷ್ಟಗಳನ್ನು ಹೊಂದಿರುವ ಸಂವಿಧಾನ ವಿಶ್ವದಲ್ಲೇ ಬೇರೊಂದಿಲ್ಲ.

ಎ. ಅಮೆರಿಕಾ ಸಂವಿಧಾನ: ಕೇವಲ 7 ವಿಧಿಗಳು, 26 ತಿದ್ದುಪಡಿಗಳು.
ಬಿ. ಫ್ರಾನ್ ಸಂವಿಧಾನ: 92 ವಿಧಿಗಳು.
ಸಿ. ಜಪಾನ್ ಸಂವಿಧಾನ: 103 ವಿಧಿಗಳು.

## 2. ನಮ್ಯ ಮತ್ತು ಅನಮ್ಯ:

ತಿದ್ದುಪಡಿ ವಿಧಾನಗಳ ಆಧಾರದ ಮೇಲೆ ಹೇಳುವುದಾದರೆ ಭಾರತದ ಸಂವಿಧಾನವು ಭಾಗಶಃ ನಮ್ಯ ಮತ್ತು ಭಾಗಶಃ ಅನಮ್ಯವಾಗಿದೆ. ಕೆ. ಸಿ. ವ್ಹೀರ್ ಇದೊಂದು ಸಮತೋಲನ ಹೊಂದಿರುವ ಸಂವಿಧಾನವೆಂದು ಅಭಿಪ್ರಾಯ ಪಟ್ಟಿದ್ದಾರೆ. ಸಂವಿಧಾನ ರಚನಕಾರರು ಕಾಲಕ್ಕೆ ಮತ್ತು ಅವಶ್ಯಕತೆಗಳಿಗೆ ಸಂಬಂಧಿಸಿದಂತೆ ಬದಲಾವಣೆ ಮಾಡಲು ಅವಕಾಶವನ್ನು ಕಲ್ಪಿಸಿದ್ದಾರೆ. ಸಂವಿಧಾನದ 368 ನೇ ವಿಧಿಯು ತಿದ್ದುಪಡಿ ವಿಧಾನಗಳ ಬಗ್ಗೆ ತಿಳಿಸುತ್ತದೆ. ಅದರಂತೆ ಸಂವಿಧಾನ ತಿದ್ದುಪಡಿಯ ಮೂರು ವಿಧಾನಗಳು ಯಾವುದೆಂದರೆ;

1. ಸಂಸತ್ತಿನ ಉಭಯ ಸದನಗಳ ಸರಳ ಬಹುಮತದೊಂದಿಗೆ ತಿದ್ದುಪಡಿ ಮಾಡುವುದು.
2. ಸಂಸತ್ತಿನ ಉಭಯ ಸದನಗಳ 2/ 3 ರಷ್ಟು ಬಹುಮತದೊಂದಿಗೆ
3. ಸಂಸತ್ತಿನ ಉಭಯ ಸದನಗಳ 2/ 3 ರಷ್ಟು ಬಹುಮತ ಪಡೆಯುವುದರ ಜೊತೆಗೆ ಭಾರತದ
4. ಒಕ್ಕೂಟದಲ್ಲಿನ ಕನಿಷ್ಟ ಅರ್ಧದಷ್ಟು ರಾಜ್ಯ ಶಾಸಕಾಂಗಗಳ ಒಪ್ಪಿಗೆ ಪಡೆಯುವುದರ ಮೂಲಕ ತಿದ್ದುಪಡಿ ಮಾಡುವುದು.

## 3. ಮೂಲಭೂತ ಹಕ್ಕುಗಳು:

ನಮ್ಮ ಸಂವಿಧಾನದ ಮೂರನೇ ಭಾಗದಲ್ಲಿ 12 ನೇ ವಿಧಿಯಿಂದ 35 ನೇ ವಿಧಿಯವರೆಗೆ ಮೂಲಭೂತ ಹಕ್ಕುಗಳನ್ನು ಅಳವಡಿಸಲಾಗಿದೆ. ಇವು ಪ್ರಜೆಗಳು ತಮ್ಮ ಸರ್ವತೋಮುಖ ವ್ಯಕ್ತಿತ್ವವನ್ನು ಬೆಳೆಸಿಕೊಳ್ಳಲು ಅಗತ್ಯವಾದ ಅವಕಾಶಗಳನ್ನು ಕಲ್ಪಿಸಿವೆ. ಸಂವಿಧಾನ ಜಾರಿಗೆ ಬಂದಾಗ ಏಳು ಮೂಲಭೂತ ಹಕ್ಕುಗಳನ್ನು ಜನತೆಗೆ ನೀಡಲಾಗಿತ್ತು. ಜನತಾ ಸರ್ಕಾರ (1978) ರಲ್ಲಿ 44 ನೇ ತಿದ್ದುಪಡಿಯ ಮೂಲಕ ಆಸ್ತಿಯ ಹಕ್ಕನ್ನು ಮೂಲಭೂತ ಹಕ್ಕುಗಳ ಪಟ್ಟಿಯಿಂದ ಅಂದರೆ ಮೂರನೇ ಭಾಗದಿಂದ ತೆಗೆದು ಹಾಕಿತು. ಇಂದು ಭಾರತದ ಪ್ರಜೆಗಳಿಗೆ ಆರು ಮೂಲಭೂತ ಹಕ್ಕುಗಳು ಮಾತ್ರ ಇವೆ.

## 4. ಮೂಲಭೂತ ಕರ್ತವ್ಯಗಳು:

ನಮ್ಮ ಸಂವಿಧಾನ ಜಾರಿಗೆ ಬಂದಾಗ ಮೂಲಭೂತ ಕರ್ತವ್ಯಗಳ ಬಗ್ಗೆ ಯಾವುದೇ ಪ್ರಸ್ತಾಪವಿರಲಿಲ್ಲ. 1976 ರಲ್ಲಿ ಸಂವಿಧಾನಕ್ಕೆ ತಂದ 42 ನೇ ತಿದ್ದುಪಡಿಯನ್ವಯ ಸಂವಿಧಾನದ 4 ಎ ಭಾಗದಲ್ಲಿ ವಿಧಿ 51 ಎ ಯ ಮೂಲಕ 10 ಮೂಲಭೂತ ಕರ್ತವ್ಯಗಳನ್ನು ಸೇರಿಸಲಾಯಿತು. ಈ ಮೂಲಕ ಭಾರತೀಯ ಪ್ರಜೆಗಳನ್ನು ಜವಾಬ್ದಾರಿಯುತ ಪೌರರನ್ನಾಗಿಸುವ ಪ್ರಯತ್ನ ಮಾಡಲಾಗಿದೆ. 2002 ರಲ್ಲಿ ತಂದ 86 ನೇಯ ಸಂವಿಧಾನ ತಿದ್ದುಪಡಿ ಕಾಯ್ದೆಯ ಮೂಲಕ 11 ನೇ ಮೂಲಭೂತ ಕರ್ತವ್ಯವನ್ನು ಸಂವಿಧಾನದಲ್ಲಿ ಹೊಸತಾಗಿ ಸೇರಿಸಲಾಯಿತು.

**5. ರಾಜ್ಯ ನೀತಿ ನಿರ್ದೇಶಕ ತತ್ವಗಳು:**

ಭಾರತವನ್ನು ಕಲ್ಯಾಣ ರಾಜ್ಯವನ್ನಾಗಿ ಮತ್ತು ಸುಖೀ ರಾಜ್ಯವನ್ನಾಗಿ ಮಾಡಲು ಹಾಗೂ ಸಾಮಾಜಿಕ ಮತ್ತು ಆರ್ಥಿಕ ಪ್ರಜಾಪ್ರಭುತ್ವ ಸ್ಥಾಪನೆಯೊಂದಿಗೆ ಸರ್ವತೋಮುಖ ಪ್ರಗತಿ ಸಾಧಿಸಲು ಭಾರತೀಯ ಸಂವಿಧಾನದ ನಾಲ್ಕನೇ ಭಾಗದಲ್ಲಿ ರಾಜ್ಯ ನೀತಿ ನಿರ್ದೇಶಕ ತತ್ವಗಳನ್ನು ನಮೂದಿಸಲಾಗಿದೆ. ರಾಜ್ಯವು ಶಾಸನಗಳನ್ನು ರೂಪಿಸುವಾಗ ಅನುಸರಿಸಬಹುದಾದ ನಿರ್ದೇಶನಾತ್ಮಕ ತತ್ವಗಳೇ ರಾಜ್ಯ ನೀತಿ ನಿರ್ದೇಶಕ ತತ್ವಗಳು. ಇವುಗಳಲ್ಲಿ ಕೆಲವು ಸಮಾಜವಾದಿ ತತ್ವಗಳಾದರೆ ಇನ್ನು ಕೆಲವು ಉದಾರವಾದಿ ಮತ್ತು ಗಾಂಧಿ ತತ್ವಗಳಾಗಿವೆ.

**6. ಸಂಸದೀಯ ಮಾದರಿ ಸರ್ಕಾರ:**

ನಮ್ಮ ಸಂವಿಧಾನವು ಬ್ರಿಟೀಷ್ ಮಾದರಿಯ ಸಂಸದೀಯ ಕಾರ್ಯಾಂಗ ಪದ್ಧತಿಯನ್ನು ಅಳವಡಿಸಿಕೊಂಡಿದೆ. ಇಂತಹ ಸರ್ಕಾರ ಪದ್ಧತಿಯಲ್ಲಿ ಪ್ರಜೆಗಳಿಂದ ಆಯ್ಕೆಯಾದ ಸಂಸತ್ತು ಪರಮಾಧಿಕಾರವನ್ನು ಹೊಂದಿದೆ. ಜನರಿಂದ ಚುನಾಯಿತರಾದ ಶಾಸಕರು ಮತ್ತು ಸಂಸದರು ಆಯಾ ಹಂತದಲ್ಲಿ ಸರ್ಕಾರವನ್ನು ರಚಿಸುವ ಮತ್ತು ನಿರ್ವಹಿಸುವ ಕಾರ್ಯ ಮಾಡುತ್ತಾರೆ. ಮಂತ್ರಿಮಂಡಲವು ವಿಧಾನಸಭೆಯ (ರಾಜ್ಯ) ಅಥವಾ ಲೋಕಸಭೆಯ (ಕೇಂದ್ರ) ವಿಶ್ವಾಸವನ್ನು ಹೊಂದಿರುವವರೆಗೂ ಅಧಿಕಾರದಲ್ಲಿರುತ್ತದೆ. ಶಾಸಕಾಂಗ ಮತ್ತು ಕಾರ್ಯಾಂಗಗಳು ಪರಸ್ಪರ ಸಂಬಂಧ ಮತ್ತು ಹೊಣೆಗಾರಿಕೆ ಹೊಂದಿರುವ ವ್ಯವಸ್ಥೆಯೇ ಸಂಸದೀಯ ಮಾದರಿಯ ಸರ್ಕಾರ.

**7. ಏಕಾತ್ಮಕ ಚೌಕಟ್ಟಿನೊಳಗೆ ಸಂಯುಕ್ತ ವ್ಯವಸ್ಥೆ:**

ನಮ್ಮ ಸಂವಿಧಾನ ರಚನಾಕಾರರು ವೈವಿಧ್ಯತೆಯಲ್ಲಿ ಏಕತೆಯನ್ನು ಸಾಧಿಸಲು ಸಂಯುಕ್ತ ರಾಜ್ಯ ಪದ್ಧತಿಯ ಅಳವಡಿಕೆ ಸೂಕ್ತವೆಂದು ಭಾವಿಸಿದರು. ಎಲ್ಲಾ ಅಧಿಕಾರಗಳು ಕೇಂದ್ರ ಸರ್ಕಾರದಲ್ಲಿ ಕೇಂದ್ರೀಕೃತವಾಗಿರುವ ವ್ಯವಸ್ಥೆಯನ್ನು ಏಕಾತ್ಮಕ ಸರ್ಕಾರ ಎಂದು ಕರೆಯಲಾಗಿದೆ. ಅದರಂತೆಯೇ ಕೇಂದ್ರ ಮತ್ತು ರಾಜ್ಯ ಸರ್ಕಾರಗಳಲ್ಲಿ ಸಂವಿಧಾನದ ಪ್ರಕಾರ ಅಧಿಕಾರ ಹಂಚಿಕೆಯಾಗಿರುವ ವ್ಯವಸ್ಥೆಯನ್ನು ಸಂಯುಕ್ತ ಸರ್ಕಾರವೆಂದು ಕರೆಯಲಾಗಿದೆ. ಭಾರತ ಸಂವಿಧಾನದಲ್ಲಿ ಏಕಾತ್ಮಕ ಮತ್ತು ಸಂಯುಕ್ತ ವ್ಯವಸ್ಥೆಗಳೆರಡರ ಲಕ್ಷಣಗಳು ಇವೆ. ಆದ್ದರಿಂದ ಕೆ. ಸಿ. ವ್ಹೀರ್ ರವರು ಇದನ್ನು ಅರೆ ಸಂಯುಕ್ತ ವ್ಯವಸ್ಥೆ ಎಂದು ಕರೆದಿದ್ದಾರೆ.

**8. ಸ್ವತಂತ್ರ ನ್ಯಾಯಾಂಗ:**

ಶಾಸಕಾಂಗ ಮತ್ತು ಕಾರ್ಯಾಂಗಗಳ ಹಸ್ತಕ್ಷೇಪದಿಂದ ಮುಕ್ತವಾಗಿರುವ ನ್ಯಾಯಾಂಗ ವ್ಯವಸ್ಥೆಯೇ ಸ್ವತಂತ್ರ ನ್ಯಾಯಾಂಗ ವ್ಯವಸ್ಥೆಯಾಗಿದೆ. ನಮ್ಮ ಸಂವಿಧಾನ ಸ್ವತಂತ್ರ ಹಾಗೂ ಏಕೀಕೃತ ನ್ಯಾಯಾಂಗ ವ್ಯವಸ್ಥೆಗೆ ಅವಕಾಶ ಕಲ್ಪಿಸಿದೆ. ಇದಕ್ಕಾಗಿ ನಮ್ಮ ಸಂವಿಧಾನ ರಚನಕಾರರು ಅಮೆರಿಕಾ ಸಂಯುಕ್ತ ಸಂಸ್ಥಾನದ ನ್ಯಾಯಾಂಗ ವ್ಯವಸ್ಥೆಗೆ ಅವಕಾಶ ಮಾದರಿಯಲ್ಲಿ ಸ್ವತಂತ್ರ ನ್ಯಾಯಾಂಗ ವ್ಯವಸ್ಥೆಯನ್ನು ಅಳವಡಿಸಿದ್ದಾರೆ, ಉದಾಹರಣೆಗೆ ನ್ಯಾಯಾಧೀಶರ ವೇತನ ಮತ್ತು ಭತ್ಯೆಯನ್ನು ವ್ಯಕ್ತಿಗತವಾಗಿ ಬದಲಾಯಿಸಲು ಬರುವುದಿಲ್ಲ. ನ್ಯಾಯಾಧೀಶರು ನಿವೃತ್ತಿಯ ನಂತರ ಯಾವುದೇ ಪ್ರಮುಖ ಸ್ಥಾನವನ್ನು ನಿರ್ವಹಿಸುವಂತಿಲ್ಲ ಪ್ರಜೆಗಳ ಹಕ್ಕು ಮತ್ತು ಸ್ವಾತಂತ್ರ್ಯಗಳ ಸಂರಕ್ಷಣೆಯ ಜವಾಬ್ದಾರಿಯು ನ್ಯಾಯಾಂಗದ್ದಾಗಿದೆ.

**9. ಏಕ ಪೌರತ್ವ:**

ದೇಶದೊಳಗಿನ ನಾಗರಿಕನಿಗಿರುವ ಏಕಮಾತ್ರ ರಾಷ್ಟ್ರೀಯ ಪೌರತ್ವವೇ ಏಕಪೌರತ್ವ. ನಮ್ಮ ಸಂವಿಧಾನದ 2 ನೇ ಭಾಗದಲ್ಲಿರುವ 5 ರಿಂದ 11 ರ ವರೆಗೆನ ವಿಧಿಗಳಲ್ಲಿ ಏಕಪೌರತ್ವದ ಕುರಿತು ವಿವರಣೆ ನೀಡಲಾಗಿದೆ. ನಮ್ಮ ದೇಶದಲ್ಲಿ ರಾಜ್ಯಗಳಿಗೆ ಪ್ರತ್ಯೇಕ ಪೌರತ್ವವಿಲ್ಲ. ಭಾರತದೊಳಗಿನ ಪ್ರಜೆಗಳಾದ ನಾವೆಲ್ಲರೂ ಏಕಪೌರತ್ವವನ್ನು ಹೊದಿದ್ದೇವೆ. 2003 ನೇ ಇಸವಿಯಲ್ಲಿ ಭಾರತದ ಸಂಸತ್ತು ಅನಿವಾಸಿ ಭಾರತೀಯರಿಗೆ ದ್ವಿಪೌರತ್ವ ನೀಡಿರುವುದು ಗಮನಾರ್ಹ.

**10. ಸಾರ್ವತ್ರಿಕ ವಯಸ್ಕ ಮತದಾನ ಪದ್ಧತಿ:**

ನಮ್ಮ ಸಂವಿಧಾನದ 326 ನೇ ವಿಧಿಯಲ್ಲಿ ಸಾರ್ವತ್ರಿಕ ವಯಸ್ಕ ಮತದಾನ ಪದ್ಧತಿಗೆ ಅವಕಾಶ ಕಲ್ಪಿಸಲಾಗಿದೆ. ಜಾತಿ, ಧರ್ಮ, ಜನಾಂಗ, ಲಿಂಗ, ಜನ್ಮಸ್ಥಳ ಮುಂತಾದವುಗಳ ಬೇಧ ಭಾವವಿಲ್ಲದೆ 18 ವರ್ಷ ವಯೋಮಿತಿ ಹೊಂದಿದ ಪ್ರತಿಯೊಬ್ಬ ನಾಗರೀಕನು ಸಾರ್ವತ್ರಿಕ ಚುನಾವಣೆಯಲ್ಲಿ ಮತ ಚಲಾಯಿಸುವ ಅಧಿಕಾರವನ್ನು ಹೊಂದಿರುವುದೇ ಸಾರ್ವತ್ರಿಕ ವಯಸ್ಕ ಮತದಾನ ಪದ್ಧತಿಯಾಗಿದೆ.

ಈ ಮೇಲಿನ ವಿಶಿಷ್ಟ ಲಕ್ಷಣಗಳೊಂದಿಗೆ ನಮ್ಮ ಸಂವಿಧಾನವು ತುರ್ತು ಪರಿಸ್ಥಿತಿಯ ಅಧಿಕಾರಿಗಳು, ಅಖಿಲ ಭಾರತ ಸೇವೆ, ಲೋಕಸೇವಾ ಆಯೋಗಗಳು, ಸ್ಥಳೀಯ ಸರ್ಕಾರಗಳು, 370 ನೇ ವಿಧಿ ಅನ್ವಯ ಕಾಶ್ಮೀರಕ್ಕೆ ವಿಶೇಷ ಸ್ಥಾನಮಾನ ಇವೇ ಮುಂತಾದ ಇನ್ನೂ ಹಲವು ಲಕ್ಷಣಗಳನ್ನು ಹೊಂದಿದೆ. ಜಗತ್ತಿನ ಅತಿ ದೊಡ್ಡ ಉದಾರವಾದಿ ಪ್ರಜಾಪ್ರಭುತ್ವದ ಯಶಸ್ವಿಗೆ, ಸಮಸ್ತ ನಾಗರೀಕರ ಹಕ್ಕು ಮತ್ತು ಸ್ವಾತಂತ್ರ್ಯಗಳ ರಕ್ಷಣೆಗೆ ಆರ್ಥಿಕ, ಸಾಮಾಜಿಕ ಮತ್ತು ರಾಜಕೀಯ ನ್ಯಾಯದ ಪರಿಪಾಲನೆಗೆ ಈ ಸಂವಿಧಾನವು ನಮಗೆ ನೆರವಾಗಿದೆ. ಆದುದರಿಂದ ಇದು ನಮ್ಮೆಲ್ಲರ ಗೌರವಕ್ಕೂ, ನಿಷ್ಠೆಗೂ ಬದ್ಧವಾಗಿದೆ.

ಒಟ್ಟಿನಲ್ಲಿ ಭಾರತದ ಸಂವಿಧಾನವು ನಮ್ಮ ಸಾರ್ವಭೌಮತೆಯ ಸಂಕೇತವಾಗಿದೆ. ಪ್ರಜಾಪ್ರಭುತ್ವದ ಹೆಗ್ಗುರುತಾಗಿದೆ. ಭಾವೈಕ್ಯತೆಯ ಲಾಂಛನವಾಗಿದೆ. ರಾಷ್ಟ್ರಭಕ್ತಿಯ ಸೆಲೆಯಾಗಿದೆ. ರಾಷ್ಟ್ರಾಭಿಮಾನದ ನೆಲೆಯಾಗಿದೆ.

## ಅಭ್ಯಾಸ

I. **ಒಂದು ವಾಕ್ಯದಲ್ಲಿ ಉತ್ತರಿಸಿ.**

1. ಭಾರತದ ಸಂವಿಧಾನ ಯಾವಾಗ ಜಾರಿಗೆ ಬಂದಿತು?
2. ಭಾರತದ ಸಂವಿಧಾನ ರಚನಾ ಸಭೆಯ ಅಧ್ಯಕ್ಷರು ಯಾರು?
3. ರಚನಾ ಸಮಿತಿ ಸಂವಿಧಾನದ ಕರಡನ್ನು ಸಂವಿಧಾನದ ರಚನಾ ಸಭೆಯ ಮುಂದೆ ಯಾವಾಗ ಮಂಡಿಸಿತು?
4. ಭಾರತದ ಸಂವಿಧಾನ ಜಾರಿಗೆ ಬಂದಾಗ ಇದ್ದ ವಿಧಿಗಳ ಸಂಖ್ಯೆ ಎಷ್ಟು?
5. ವಿಶ್ವದ ಅತ್ಯಂತ ದೊಡ್ಡ ರಾಷ್ಟ್ರೀಯ ಸಂವಿಧಾನ ಯಾವುದು?
6. ಯಾವ ವಿಧಿಯು ಭಾರತದ ಸಂವಿಧಾನದ ತಿದ್ದುಪಡಿಯ ಬಗ್ಗೆ ವಿವರಿಸುತ್ತದೆ?
7. ಸಂಸದೀಯ ಮಾದರಿ ಸರ್ಕಾರ ಎಂದರೇನು?
8. ಏಕ ಪೌರತ್ವ ಎಂದರೇನು?
9. ರಾಷ್ಟ್ರೀಯ ತುರ್ತು ಪರಿಸ್ಥಿತಿಯನ್ನು ಯಾರು ಘೋಷಿಸುತ್ತಾರೆ?
10. ಲಿಖಿತ ಸಂವಿಧಾನ ಎಂದರೇನು?

II. **ಕೊಟ್ಟಿರುವ ನಾಲ್ಕು ಪರ್ಯಾಯ ಉತ್ತರಗಳಲ್ಲಿ ಸರಿಯಾದ ಉತ್ತರವನ್ನು ಆರಿಸಿ, ಉತ್ತರಕ್ಕಾಗಿ ನೀಡಿರುವ ಸ್ಥಳದಲ್ಲಿ ಬರೆಯಿರಿ.**

1. ಈ ದಿನವನ್ನು ನಾವು ಗಣರಾಜ್ಯ ದಿನವೆಂದು ಪ್ರತಿವರ್ಷ ಆಚರಿಸುತ್ತೇವೆ.

ಎ. ಅಗಸ್ಟ್- 15

ಬಿ. ಜನವರಿ- 26

ಸಿ. ಅಕ್ಟೋಬರ್- 2

ಡಿ. ನವಂಬರ್- 14

2. ಇವರು ಭಾರತದ ಸಂವಿಧಾನ ಕರಡು ಸಮಿತಿಯ ಅಧ್ಯಕ್ಷರು.

ಎ. ಡಾ. ಬಾಬು ರಾಜೇಂದ್ರ ಪ್ರಸಾದ್

ಬಿ. ಸಚ್ಚಿದಾನಂದ ಸಿನ್ಹ

ಸಿ. ಸರ್ದಾರ್ ವಲ್ಲಭ ಬಾಯಿ ಪಟೇಲ್

ಡಿ. ಡಾ. ಬಿ. ಆರ್. ಅಂಬೇಡ್ಕರ್

3. 1909 ರಲ್ಲಿ ಈ ಸುಧಾರಣೆ ಜಾರಿಗೆ ಬಂದಿತು.

ಎ. ಮಾರ್ಲೆ- ಮಿಂಟೋ

ಬಿ. ಮಾಂಟೆಗೋ- ಚೆಮ್ಸ್‌ಫೋರ್ಡ್

ಸಿ. ಭಾರತ ಸರ್ಕಾರದ ಕಾಯ್ದೆ

ಡಿ. ಇಂಡಿಯನ್ ಕೌನ್ಸಿಲ್ ಆಕ್ಟ್

4. ಸಂವಿಧಾನ ರಚನೆಗಾಗಿ ರಚಿಸಲಾದ ಒಟ್ಟು ಸಮಿತಿಗಳು.

ಎ. 18

ಬಿ. 20

ಸಿ. 22

ಡಿ. 25

5. ಪ್ರಸ್ತುತ ನಮ್ಮ ಸಂವಿಧಾನದಲ್ಲಿರುವ ಭಾಗಗಳು.

ಎ. 23

ಬಿ. 24

ಸಿ. 25

ಡಿ. 26

6. ಜಮ್ಮು ಕಾಶ್ಮೀರಕ್ಕೆ ವಿಶೇಷ ಸ್ಥಾನ ಮಾನ ನೀಡುವ ನಮ್ಮ ಸಂವಿಧಾನದ ವಿಧಿ.

ಎ. 356

ಬಿ. 360

ಸಿ. 365

ಡಿ. 370

III. **ಮೂರು ಅಥವಾ ನಾಲ್ಕು ವಾಕ್ಯಗಳಲ್ಲಿ ಉತ್ತರಿಸಿ.**

1. ಸಮಾಜವಾದಿ ರಾಷ್ಟ್ರ ಎಂದರೇನು?
2. ಗಣರಾಜ್ಯ ಎಂದರೇನು?
3. ಮೂಲಭೂತ ಹಕ್ಕುಗಳು ಎಂದರೇನು?
4. ಸಾರ್ವತ್ರಿಕ ವಯಸ್ಕ ಮತದಾನ ಪದ್ಧತಿ ಎಂದರೇನು?
5. ನಮ್ಯ ಸಂವಿಧಾನ ಮತ್ತು ಅನಮ್ಯ ಸಂವಿಧಾನಕ್ಕಿರುವ ವ್ಯತ್ಯಾಸ ತಿಳಿಸಿ.
6. ಲಿಖಿತ ಸಂವಿಧಾನ ಮತ್ತು ಅಲಿಖಿತ ಸಂವಿಧಾನಕ್ಕಿರುವ ವ್ಯತ್ಯಾಸ ತಿಳಿಸಿ.
7. 356 ನೇ ವಿಧಿಯ ಮಹತ್ವ ತಿಳಿಸಿ.

IV. **ಐದು ಅಥವಾ ಆರು ವಾಕ್ಯಗಳಲ್ಲಿ ಉತ್ತರಿಸಿ.**

1. ಸ್ವತಂತ್ರ ನ್ಯಾಯಾಂಗ ವ್ಯವಸ್ಥೆ ಎಂದರೇನು?
2. ಭಾರತ ಸಂವಿಧಾನದ ಮೂಲಾಧಾರಗಳನ್ನು ತಿಳಿಸಿ.
3. ನಮ್ಮ ಸಂವಿಧಾನವನ್ನು ಎರವಲು ಸಂವಿಧಾನ ಎನ್ನಲು ಕಾರಣವೇನು?
4. ಅಖಿಲ ಭಾರತ ಸೇವೆ ಎಂದರೇನು? ಉದಾಹರಣೆ ಕೊಡಿ.

V. **ಎಂಟು ಅಥವಾ ಹತ್ತು ವಾಕ್ಯಗಳಲ್ಲಿ ಉತ್ತರಿಸಿ.**

1. ಭಾರತದ ಸಂವಿಧಾನದ ಪ್ರಧಾನ ಲಕ್ಷಣಗಳನ್ನು ವಿವರಿಸಿ.
2. ಭಾರತ ಸಂವಿಧಾನ ಮೂಲಾಧಾರಗಳನ್ನು ವಿವರಿಸಿ.
3. ನಮ್ಮ ಸಂವಿಧಾನ ಬೆಳವಣಿಗೆಯ ವಿವಿಧ ಹಂತಗಳನ್ನು ತಿಳಿಸಿ.

**ಸಲಹಾತ್ಮಕ ಚಟುವಟಿಕೆಗಳು:**

1. ಸಂವಿಧಾನ ರಚನಾ ಸಭೆಯ ವಿವಿಧ ಸಮಿತಿಗಳನ್ನು ಪಟ್ಟಿಮಾಡಿ.
2. ಸಂವಿಧಾನ ರಚನಾ ಕಾರ್ಯದಲ್ಲಿ ಪಾಲ್ಗೊಂಡ ಪ್ರಮುಖ ಸದಸ್ಯರ ಹೆಸರುಗಳನ್ನು ಪಟ್ಟಿಮಾಡಿ.

# ಅಧ್ಯಾಯ- 2 ಪ್ರಸ್ತಾವನೆ (PREAMBLE)

## ಕಲಿಕೆಯ ಉದ್ದೇಶಗಳು

1. ಪ್ರಸ್ತಾವನೆಯ ಅರ್ಥ, ಮಹತ್ವ ಮತ್ತು ಹಿನ್ನೆಲೆಯನ್ನು ತಿಳಿಯುವುದು.
2. ಪ್ರಸ್ತಾವನೆಯನ್ನು ಯಥಾವತ್ತಾಗಿ ಅಭ್ಯಾಸಿಸುವುದು.
3. ಪ್ರಸ್ತಾವನೆಯಲ್ಲಿ ಉಲ್ಲೇಖಿತವಾದ ಸಂವಿಧಾನದ ತತ್ವಗಳನ್ನು ಅರ್ಥೈಸಿಕೊಳ್ಳುವುದು.
4. ಪ್ರಸ್ತಾವನೆಯಲ್ಲಿ ಮೂಡಿ ಬಂದ ಸಂವಿಧಾನದ ಗುರಿಗಳನ್ನು ಪರಿಚಯಿಸಿಕೊಳ್ಳುವುದು.

"ಪ್ರಸ್ತಾವನೆಯು ಸಂವಿಧಾನದ ಕೀಲಿ ಕೈ" ಎನ್. ಎ. ಪಾಲ್ಖಿವಾಲ.

"ನಮ್ಮ ಸಂವಿಧಾನದ ಪ್ರಸ್ತಾವನೆಯು ಸಾರ್ವಭೌಮ, ಪ್ರಜಾಸತಾತ್ಮಕ, ಗಣತಂತ್ರ ವ್ಯವಸ್ಥೆಯ ಜಾತಕ" ಕೆ. ಎಂ. ಮುನ್ಷಿ

### ಪೀಠಿಕೆ:

ವಿಶ್ವದ ಬಹುತೇಕ ರಾಷ್ಟ್ರಗಳ ಸಂವಿಧಾನಗಳು ಪೂರ್ವ ಪೀಠಿಕೆಯ ರೂಪದಲ್ಲಿ ಪ್ರಸ್ತಾವನೆಯನ್ನು ಹೊಂದಿವೆ. ಅದರಂತೆಯೇ ಬೃಹತ್ ಗಾತ್ರದ ಉಧಾರವಾದಿ ಪ್ರಜಾಪ್ರಭುತ್ವ ರಾಷ್ಟ್ರವಾದ ಭಾರತವನ್ನು ನಿಯಂತ್ರಿಸಿ, ನಿರ್ದೇಶಿಸುವ ನಮ್ಮ ಸಂವಿಧಾನಕ್ಕೂ ಅದರದೇ ಆದ ಪ್ರಸ್ತಾವನೆ ಇದೆ. ಈ ಪ್ರಸ್ತಾವನೆಯನ್ನು ಅಮೇರಿಕಾ ಸಂಯುಕ್ತ ಸಂಸ್ಥಾನದ ಸಂವಿಧಾನದ ಪ್ರಸ್ತಾವನೆಯ ಮಾದರಿಯಲ್ಲಿ ಅಳವಡಿಸಿಕೊಳ್ಳಲಾಗಿದೆ. ರಾಷ್ಟ್ರೀಯ ಜೀವನದ ತಳಹದಿಯಾಗಬೇಕಾದ ತತ್ವಗಳ ಪ್ರಸ್ತಾಪ ಇದರಲ್ಲಿದೆ. ಅದರಂತೆಯೇ ಸಮಸ್ತ ಜನರ ಸರ್ವಾಂಗೀಣ ಅಭಿವೃದ್ಧಿಗಾಗಿ ಭಾರತ ಸಾಧಿಸಬೇಕಾದ ಧ್ಯೇಯ ಗುರಿಗಳ ನೀಲಿನಕ್ಷೆಯಂತಿರುವ ಸಂವಿಧಾನದ ಪ್ರಸ್ತಾವನೆಯಲ್ಲಿ ಉಲ್ಲೇಖಿಸಲಾಗಿದೆ. ನಮ್ಮ ಸಂವಿಧಾನದ ಪ್ರಸ್ತಾವನೆಯು ಅರ್ಥಗರ್ಭಿತವಾದ ಪವಿತ್ರ ಹೇಳಿಕೆಯಂತಿದ್ದು ಎಲ್ಲರ ಗಮನವನ್ನು ಸೆಳೆಯುತ್ತಿದೆ.

### ಅರ್ಥ ಮತ್ತು ಮಹತ್ವ:

"ಭೂ ಪ್ರದೇಶವೊಂದರ ಜನಜೀವನದಲ್ಲಿ ಸಾಕಾರಗೊಳಿಸುವುದಕ್ಕಾಗಿ ಅಳವಡಿಸಿಕೊಳ್ಳಬಹುದಾದ ತತ್ವಗಳು ಮತ್ತು ಧ್ಯೇಯ ಗುರಿಗಳ ಸಾರಸತ್ವವನ್ನು ಸಂವಿಧಾನ ಮತ್ತು ಸನ್ನದುಗಳ ಆರಂಭದಲ್ಲಿ ಅಳವಡಿಸಿಕೊಳ್ಳುವುದೇ ಪ್ರಸ್ತಾವನೆಯಾಗಿದೆ."

"ಪ್ರಸ್ತಾವನೆ ಸಂವಿಧಾನದ ಸತ್ವ. ಇದು ಸಂವಿಧಾನದ ಯೋಗ್ಯತೆಯನ್ನು ಅಳೆಯಲು ಇರುವ ಒಂದು ಅಳತೆಗೋಲು" ಎಂದು ಠಾಕೂರ್ ದಾಸ್ ಭಾರ್ಗವ ರವರು ವ್ಯಾಖ್ಯಾನಿಸಿದ್ದಾರೆ. ಸಂವಿಧಾನದ ಆತ್ಮವೆಂದೇ ಪರಿಗಣಿಸಲ್ಪಟ್ಟಿರುವ ಪ್ರಸ್ತಾವನೆಯು ಸಂವಿಧಾನದ ಲಕ್ಷಣಗಳು ಮತ್ತು ತತ್ವಗಳನ್ನು ಪರಿಚಯಿಸುವ ಟಿಪ್ಪಣಿಯಾಗಿದೆ. ಪ್ರಸ್ತಾವನೆಯು ಸಂವಿಧಾನದ ಭಾಗವೇ ಎನ್ನುವುದರ ಕುರಿತು ಭಿನ್ನಭಿಪ್ರಾಯಗಳಿದ್ದವು, 1960 ರಲ್ಲಿ ಸರ್ವೋಚ್ಚ ನ್ಯಾಯಾಲಯವು 'ಪ್ರಸ್ತಾವನೆಯು ಸಂವಿಧಾನದ ಭಾಗವಾಗಿರುವುದಿಲ್ಲ' ಎಂದು ತೀರ್ಪು ನೀಡಿತು. ಅದೇ ಸರ್ವೋಚ್ಚ ನ್ಯಾಯಾಲಯವು 1973 ರಲ್ಲಿ ಕೇಶವಾನಂದ ಭಾರತಿ ಮೊಕದ್ದಮೆಯಲ್ಲಿ

‘ಪ್ರಸ್ತಾವನೆಯು ಸಂವಿಧಾನದ ಭಾಗವಾಗಿರುತ್ತದೆ’ ಎಂದು ತೀರ್ಪು ನೀಡಿತು. ಹೀಗಾಗಿ ಈಗ ಪ್ರಸ್ತಾವನೆಯು ಸಂವಿಧಾನದ ಭಾಗವಾಗಿರುತ್ತದೆ. ಇದು ಪ್ರಸ್ತಾವನೆಯ ಮಹತ್ವವನ್ನು ಇಮ್ಮಡಿಗೊಳಿಸಿತು. ಆದ್ದರಿಂದ ಪ್ರಸ್ತಾವನೆಯು ‘ಸಂವಿಧಾನದ ಒಡವೆ’ ಎಂಬ ವರ್ಣನೆಯು ಅದಕ್ಕೆ ಭೂಷಣವಾಗಿದೆ. ಒಟ್ಟಿನಲ್ಲಿ ಹೇಳುವುದಾದರೆ ರಾಜ್ಯಾಡಳಿತದ ನೀಲಿನಕ್ಷೆಯಂತಿರುವ ಸಂವಿಧಾನಕ್ಕೆ ರಾಷ್ಟ್ರವೊಂದರ ತತ್ವ ಚಿಂತನೆ ಮತ್ತು ಧ್ಯೇಯ ಗುರಿಗಳ ಕನ್ನಡಿಯಂತಿರುವ ಪ್ರಸ್ತಾವನೆಯು ಸಮಸ್ತ ಜನತೆಗೆ ಪ್ರೇರಣೇಯ ಸೆಲೆಯಾಗಿದೆ.

## ಹಿನ್ನೆಲೆ:

ನಮ್ಮ ಸಂವಿಧಾನದ ಪ್ರಸ್ತಾವನೆಗೆ ವಿಶಿಷ್ಟ ಹಿನ್ನೆಲೆ ಇದೆ. 1946 ರ ಡಿಸೆಂಬರ್ 13 ರಂದು ಜವಾಹರ್ ಲಾಲ್ ನೆಹರೂ ರವರು ಧ್ಯೇಯಗಳ ನಿರ್ಣಯವನ್ನು ಸಂವಿಧಾನ ರಚನಾ ಸಭೆಯಲ್ಲಿ ಮಂಡಿಸಿದರು. 1947 ರ ಜನವರಿ 22 ರಂದು ರಚನಾ ಸಭೆಯು ಈ ನಿರ್ಣಯವನ್ನು ಅಂಗೀಕರಿಸಿತು. ಈ ನಿರ್ಣಯದಲ್ಲಿ ಭಾರತದ ಸ್ವಾತಂತ್ರ, ಗಣರಾಜ್ಯ, ಪ್ರಜೆಗಳ ಪರಮಾಧಿಕಾರ, ಸಾಮಾಜಿಕ, ಆರ್ಥಿಕ ಹಾಗೂ ರಾಜಕೀಯ ನ್ಯಾಯ, ಅಲ್ಪ ಸಂಖ್ಯಾತರ ಮತ್ತು ಹಿಂದುಳಿದವರ ರಕ್ಷಣೆಗಳನ್ನು ತಿಳಿಸಲಾಗಿತ್ತು. ಈ ನಿರ್ಣಯದ ಆಧಾರದ ಮೇಲೆ ರಚಿತಗೊಂಡ ಪ್ರಸ್ತಾವನೆಯನ್ನು 1949 ಅಕ್ಟೋಬರ್ 17 ರಂದು ಹಲವು ಮಾರ್ಪಾಡುಗಳೊಂದಿಗೆ ಸಂವಿಧಾನ ರಚನಾ ಸಭೆ ಅಳವಡಿಸಿಕೊಂಡಿತು.

## ನಮ್ಮ ಸಂವಿಧಾನದ ಪ್ರಸ್ತಾವನೆಯು ಈ ಕೆಳಕಂಡಂತಿದೆ.

ಭಾರತದ ಪ್ರಜೆಗಳಾದ ನಾವು ಭಾರತವನ್ನು ಒಂದು ಸಾರ್ವಭೌಮ, ಸಮಾಜವಾದಿ, ಜಾತ್ಯತೀತ, ಪ್ರಜಾಸತ್ತಾತ್ಮಕ ಗಣರಾಜ್ಯವನ್ನಾಗಿ ವಿಧಿಯುಕ್ತವಾಗಿ ವ್ಯವಸ್ಥೆಗೊಳಿಸಲು ಮತ್ತು ಅದರ ಎಲ್ಲಾ ಪೌರರಿಗೆ; ಸಾಮಾಜಿಕ, ಆರ್ಥಿಕ ಮತ್ತು ರಾಜಕೀಯ ನ್ಯಾಯ; ವಿಚಾರ, ಅಭಿವ್ಯಕ್ತಿ, ನಂಬಿಕೆ, ಧರ್ಮಶ್ರದ್ದೆ ಮತ್ತು ಉಪಾಸನಾ ಸ್ವಾತಂತ್ರ್ಯ; ಸ್ಥಾನಮಾನ ಮತ್ತು ಅವಕಾಶಗಳಲ್ಲಿ ಸಮಾನತೆ.

ಎಲ್ಲರಿಗೂ ದೊರೆಯುವಂತೆ ಮಾಡುವುದಕ್ಕೆ ವ್ಯಕ್ತಿ ಗೌರವ ಮತ್ತು ರಾಷ್ಟ್ರದ ಏಕತೆ ಹಾಗೂ ಸಮಗ್ರತೆಯನ್ನು ರಕ್ಷಿಸಿ, ಭ್ರಾತೃತ್ವ ಭಾವನೆಯನ್ನು ಎಲ್ಲರಲ್ಲೂ ವೃದ್ಧಿಗೊಳಿಸುವುದಕ್ಕಾಗಿ ಧೃಡ ಸಂಕಲ್ಪ ಮಾಡಿ, ನಮ್ಮ ಸಂವಿಧಾನ ರಚನಾ ಸಭೆಯಲ್ಲಿ 1949 ರ ನವೆಂಬರ್ 26 ನೇಯ ದಿನ ಈ ಸಂವಿಧಾನವನ್ನು ಅಂಗೀಕರಿಸಿ ಕಾನೂನು ರೂಪದಲ್ಲಿ ಆತ್ಮಾರ್ಪಿತ ಮಾಡಿಕೊಂಡಿದ್ದೇವೆ.

## ಪ್ರಸ್ತಾವನೆಯ ಮುಖ್ಯಾಂಶಗಳು

### 1. ಭಾರತದ ಪ್ರಜೆಗಳು (We the people of India):

ಪ್ರಸ್ತಾವನೆಯಲ್ಲಿ ಉಲ್ಲೇಖಿಸಲಾದ ತತ್ವಗಳು ಸಂವಿಧಾನದ ಚಿಂತನೆಯನ್ನು ಬಿಂಬಿಸುತ್ತವೆ. ಭಾರತದ ಪ್ರಜೆಗಳಾದ ನಾವು ಎಂಬುವುದರೊಂದಿಗೆ ಆರಂಭವಾಗುವ ಪ್ರಸ್ತಾವನೆಯು ಮಹತ್ವಪೂರ್ಣದ್ದಾಗಿದೆ. ಸಂವಿಧಾನ ರಚನಾ ಸಭೆಯ ಸದಸ್ಯರುಗಳು ಸಂವಿಧಾನವನ್ನು ರಚಿಸಿದ್ದರೂ ಅದರ ರಚನಾ ಅಧಿಕಾರವನ್ನು ಭಾರತದ ಪ್ರಜೆಗಳಿಂದ ಪಡೆದಿರುವವರೆಂಬುದನ್ನು ಇದು ಸೂಚಿಸುತ್ತದೆ. ಪ್ರಸ್ತಾವನೆಯ ಕೊನೆಯ ಭಾಗದಲ್ಲಿರುವ

ವಾಕ್ಯವು ಸಹ ಸಂವಿಧಾನವು ಭಾರತದ ಪ್ರಜೆಗಳಿಂದಲೇ ರಚಿತಗೊಂಡು ಕಾನೂನಿನ ಅನ್ವಯ ಭಾರತೀಯರಿಂದಲೇ ಆತ್ಮಾರ್ಪಿತಗೊಂಡಿದೆ ಎಂಬುದನ್ನು ಸೂಚಿಸುತ್ತದೆ. ಇದು ರಾಜಕೀಯ ಸಾರ್ವಭೌಮ ಅಧಿಕಾರವು ಪ್ರಜೆಗಳಲ್ಲಿ ಇದೆ ಎಂಬುವುದನ್ನು ಸೂಚಿಸುತ್ತದೆ.

**2. ಸಾರ್ವಭೌಮತ್ವ (Sovereignty):**

ಸಾರ್ವಭೌಮತ್ವವೇ ಸ್ವತಂತ್ರ ರಾಷ್ಟ್ರದ ಜೀವಾಳ, ಸಾರ್ವಭೌಮ ರಾಷ್ಟ್ರವಾದ ಭಾರತ ತನ್ನ ಆಂತರೀಕ ನೀತಿ ಮತ್ತು ವಿದೇಶಾಂಗ ನೀತಿಯನ್ನು ಬೇರೆ ರಾಷ್ಟ್ರಗಳ ಒತ್ತಡ ಅಥವಾ ಪ್ರಭಾವ ವಿಲ್ಲದೇ ಸ್ವತಂತ್ರವಾಗಿ ರಚಿಸುತ್ತದೆ. ಇದು ರಾಷ್ಟ್ರದ ಸಾರ್ವಭೌಮ ಅಧಿಕಾರವನ್ನು ಎತ್ತಿಹಿಡಿಯುತ್ತದೆ.

**3. ಸಮಾಜವಾದ (Socialism):**

1976 ರಲ್ಲಿ 42 ನೇ ತಿದ್ದುಪಡಿಯ ಮೂಲಕ ಸಮಾಜವಾದ ಎಂಬ ಪದವನ್ನು ಪ್ರಸ್ತಾವನೆಯಲ್ಲಿ ಸೇರಿಸಲಾಗಿದೆ. ಭಾರತವನ್ನು ಸುಖೀರಾಜ್ಯ ಮತ್ತು ಸಮಾಜವಾದಿ ರಾಷ್ಟ್ರವನ್ನಾಗಿ ಮಾಡುವುದು ಸಂವಿಧಾನದ ಪ್ರಧಾನ ಗುರಿಯಾಗಿದೆ. ಪ್ರಜಾಪ್ರಭುತ್ವದ ಮೂಲಕ ಸಮಾಜವಾದವನ್ನು ಜಾರಿಗೊಳಿಸಬಹುದೆಂದು ಇದು ತಿಳಿಸುತ್ತದೆ. ರಾಜ್ಯನೀತಿ ನಿರ್ದೇಶಕ ತತ್ವಗಳಲ್ಲಿರುವ ಕೆಲವು ಅಂಶಗಳು ಮತ್ತು ಮಿಶ್ರ ಆರ್ಥಿಕ ವ್ಯವಸ್ಥೆಯ ಲಕ್ಷಣಗಳು ಸಮಾಜವಾದವನ್ನು ಪುಷ್ಠೀಕರಿಸುತ್ತವೆ. ಬಡವರ ಮತ್ತು ಶ್ರೀಮಂತರ ಅಂತರವನ್ನು ಕಡಿಮೆಗೊಳಿಸಿ ಶೋಷಣೆ ರಹಿತ ಸಮತಾ ಸಮಾಜವನ್ನು ಕಟ್ಟುವುದು ಇದರ ಗುರಿ.

**4. ಜಾತ್ಯಾತೀತತೆ (Secularlism):**

1976 ರಲ್ಲಿ ಸಂವಿಧಾನದ 42 ನೇ ತಿದ್ದುಪಡಿ ಮೂಲಕ 'ಜಾತ್ಯಾತೀತ' ಎಂಬ ಪದವನ್ನು ಪ್ರಸ್ತಾವನೆಯಲ್ಲಿ ಸೇರಿಸಲಾಯಿತು. ಎಲ್ಲಾ ಧರ್ಮಗಳನ್ನು ಸಮಾನತೆಯಿಂದ ಕಾಣಬೇಕೆಂಬುದನ್ನು ಪ್ರತಿಪಾದಿಸುವುದೇ ಜಾತ್ಯಾತೀತತೆ. ಇದು ಕೇವಲ ಲೌಕಿಕ ಜೀವನಕ್ಕೆ ಸಂಬಂದಿಸಿದ್ದಾಗಿರದೇ ಆಧ್ಯಾತ್ಮಿಕ ಜೀವನಕ್ಕೂ ಸಂಬಂದಿಸಿದೆ ಎಂದು ಜವಾಹರಲಾಲ್ ನೆಹರೂ ರವರು ಅಭಿಪ್ರಾಯ ಪಟ್ಟಿದ್ದಾರೆ. ಅವರ ಪ್ರಕಾರ ಜಾತ್ಯಾತೀತತೆ 4 ತತ್ವಗಳನ್ನು ಒಳಗೊಂಡಿದೆ. ಅವುಗಳೆಂದರೆ,

1. ಎಲ್ಲಾ ಧರ್ಮಗಳಿಗೂ ಸಮಾನ ಸ್ಥಾನಮಾನವಿರಬೇಕು.
2. ಧರ್ಮದ ವಿಷಯದಲ್ಲಿ ರಾಜ್ಯ ತಟಸ್ಥ ನೀತಿಯನ್ನು ಅನುಸರಿಸಬೇಕು.
3. ಬಹುಸಂಖ್ಯಾತರು ಮತ್ತು ಅಲ್ಪಸಂಖ್ಯಾತರು ಸಹಕಾರದಿಂದ ಜೀವನ ನೆಡೆಸಬೇಕು.
4. ಸಾಮಾಜಿಕ ಜೀವನವನ್ನು ಜಾತ್ಯಾತೀತಕರಣಗೊಳಿಸಬೇಕು.

ಒಟ್ಟಿನಲ್ಲಿ ಸರ್ವಧರ್ಮ ಸಮಭಾವದ ನೀತಿಯನ್ನು ಅನುಸರಿಸುವುದೇ ಜಾತ್ಯಾತೀತತೆಯಾಗಿದೆ.

**5. ಪ್ರಜಾಸತ್ತಾತ್ಮಕತೆ (Democratic):**

ಪ್ರಜಾಪ್ರಭುತ್ವವು ಒಂದು ಸರ್ಕಾರ ಪದ್ಧಯಾಗಿದೆ. 19 ನೇ ಶತಮಾನದಲ್ಲಿ ಅಬ್ರಹಂ ಲಿಂಕನ್ 'ಪ್ರಜೆಗಳಿಂದ ಪ್ರಜೆಗಳಿಗಾಗಿ ಪ್ರಜೆಗಳಿಗೋಸ್ಕರ ಇರುವ ಸರಕಾರವೇ ಪ್ರಜಾಪ್ರಭುತ್ವ'

ಎಂದಿದ್ದಾರೆ. ಭಾರತದಲ್ಲಿಯು ಸಹ ಪ್ರಜಾಪ್ರಭುತ್ವವಿದೆ. ಪ್ರಜೆಗಳು ಸಾರ್ವತ್ರಿಕ ಚುನಾವಣೆಗಳಲ್ಲಿ ತಮ್ಮಿಂದ ಆಯ್ಕೆಯಾದ ಪ್ರತಿನಿಧಿಗಳ ಮೂಲಕ ಆಳಲ್ಪಡುತ್ತಾರೆ. ಇಲ್ಲಿ ಪ್ರಜೆಗಳೇ ಪ್ರಭುಗಳಾಗಿರುವ ಸರ್ಕಾರವೇ ಪ್ರಜಾಪ್ರಭುತ್ವವಾಗಿದೆ

6. **ಗಣರಾಜ್ಯ (Republic):**

ರಾಷ್ಟ್ರದ ಮುಖ್ಯಸ್ಥರನ್ನು ನಿಗಧಿತ ಅವಧಿಗೆ ಪ್ರಜೆಗಳಿಂದ ಪ್ರತ್ಯಕ್ಷಗಳಿಂದ ಅಥವಾ ಪರೋಕ್ಷವಾಗಿ ಚುನಾಯಿಸುವ ವ್ಯವಸ್ಥೆಯೇ ಗಣರಾಜ್ಯ. ಇಂಗ್ಲೆಂಡ್ ಪ್ರಜಾಪ್ರಭುತ್ವ ರಾಷ್ಟ್ರವಾದರೂ ಗಣರಾಜ್ಯವಲ್ಲ. ಏಕೆಂದರೆ ಇಂಗ್ಲೆಂಡ್ ನ ಮುಖ್ಯಸ್ಥರಾದ ದೊರೆ/ ರಾಣಿ ಅನುವಂಶಿಕವಾಗಿ ಮುಂದುವರೆಯುತ್ತಾರೆ. ಭಾರತದ ರಾಷ್ಟ್ರಪತಿಗಳು ಪ್ರಜೆಗಳಿಂದ ಪರೋಕ್ಷ ಚುನಾವಣಾ ವಿಧಾನದ ಮೂಲಕ ಆಯ್ಕೆಯಾಗುತ್ತಾರೆ.

7**. ನ್ಯಾಯ (Justice):**

ನ್ಯಾಯ, ಸ್ವಾತಂತ್ರ್ಯ, ಸಮಾನತೆ ಮತ್ತು ಭ್ರಾತೃತ್ವ ಭಾರತದ ರಾಜಕೀಯ ಪದ್ಧತಿಯ ನಾಲ್ಕು ತಾತ್ವಿಕ ಸ್ತಂಭಗಳಾಗಿವೆ. ಎಲ್ಲ ಪೌರರಿಗೂ ಸಾಮಾಜಿಕ, ಆರ್ಥಿಕ, ಮತ್ತು ರಾಜಕೀಯ ನ್ಯಾಯವನ್ನು ದೊರಕಿಸಿಕೊಡುವುದೇ ಸಂವಿಧಾನದ ಮುಖ್ಯ ಗುರಿ. 'ಅಧಿಕೃತವಾಗಿ ದೊರಕಬೇಕಿರುವುದನ್ನು ಪಡೆದುಕೊಳ್ಳುವುದೇ ನ್ಯಾಯ'.

1. **ಸಾಮಾಜಿಕ ನ್ಯಾಯ:** ದುರ್ಬಲರು, ಹಿಂದುಳಿದ ವರ್ಗದವರು ಮತ್ತು ಶ್ರಮಜೀವಿಗಳ ಹಿತಾಸಕ್ತಿಗಳನ್ನು ಸಂರಕ್ಷಿಸಿ ಜೀವನ ಮಟ್ಟವನ್ನು ಉತ್ತಮ ಪಡಿಸುವುದೇ ಸಾಮಾಜಿಕ ನ್ಯಾಯ.
2. **ಆರ್ಥಿಕ ನ್ಯಾಯ:** ಬಡತನವನ್ನು ನಿರ್ಮೂಲನೆಗೊಳಿಸಲು ಸಂಪನ್ಮೂಲಗಳ ಸಮರ್ಪಕ ಹಂಚಿಕೆಯ ಮೂಲಕ ಆರ್ಥಿಕ ಸಮಾನತೆ ಮತ್ತು ಪ್ರಗತಿಯನ್ನು ಸಾಧಿಸುವುದೇ ಆರ್ಥಿಕ ನ್ಯಾಯ ಇದನ್ನು ಆರ್ಥಿಕ ಸಂತರ್ಪಣೆ ಎಂತಲೂ ಕರೆಯಲಾಗಿದೆ.
3. **ರಾಜಕೀಯ ನ್ಯಾಯ:** ಜಾತಿ ವರ್ಗ ಧರ್ಮಗಳ ಬೇದಭಾವಗಳಿಲ್ಲದೇ ರಾಜಕೀಯ ಮತ್ತು ಆಡಳಿತದಲ್ಲಿ ಎಲ್ಲರಿಗೂ ಭಾಗವಹಿಸಲು ಇರುವ ಅವಕಾಶವೇ ರಾಜಕೀಯ ನ್ಯಾಯ. ಇದು ಮಾನವೀಯತೆ ಮತ್ತು ಏಕತೆಯ ಸಂಕೇತವಾಗಿದೆ.

**8. ಸ್ವಾತಂತ್ರ್ಯ(Liberty):**

ಇತರರ ಹಕ್ಕುಗಳಿಗೆ ಚ್ಯುತಿ ಬಾರದಂತೆ ನಮ್ಮ ಹಕ್ಕುಗಳನ್ನು ನಿರಾತಂಕವಾಗಿ ಅನುಭವಿಸುವುದೇ ಸ್ವಾತಂತ್ರ್ಯ ಪ್ರಸ್ತಾವನೆಯಲ್ಲಿ ವಿಚಾರ ಸ್ವಾತಂತ್ರ್ಯ, ಅಭಿವ್ಯಕ್ತಿ ಸ್ವಾತಂತ್ರ್ಯ ನಂಬಿಕೆಯ ಸ್ವಾತಂತ್ರ್ಯ, ಧರ್ಮಶ್ರದ್ಧೆ ಮತ್ತು ಉಪಾಸನ ಸ್ವಾತಂತ್ರ್ಯಗಳಿಗೆ ಅವಕಾಶ ಕಲ್ಪಿಸಿರುವುದು ಪ್ರಜಾಪ್ರಭುತ್ವದ ಶ್ರೇಷ್ಠತೆಗೆ ಸಾಕ್ಷಿಯಾಗಿದೆ. ಸ್ವಾತಂತ್ರ್ಯವು ಎಲ್ಲರ ಸರ್ವತೋಮುಖ ಬೆಳವಣಿಗೆಗೆ ಅತ್ಯವಶ್ಯಕ. ವ್ಯಕ್ತಿಗೆ ಸ್ವಾತಂತ್ರ್ಯವಿಲ್ಲದ ಪ್ರಜಾಪ್ರಭುತ್ವವನ್ನು ಊಹಿಸಿಕೊಳ್ಳಲಾಗದು. ಆದ್ದರಿಂದ ಸತ್ಯಾಸತ್ಯತೆಯನ್ನು ಸರಿ ತಪ್ಪುಗಳನ್ನು ಯೋಚಿಸುವ ಮತ್ತು ಹೇಳುವ ವಿಚಾರ ಸ್ವಾತಂತ್ರ್ಯವು ಅತ್ಯಗತ್ಯ. ಇಷ್ಟಾನಿಷ್ಟಗಳನ್ನು ನೋವುನಲಿವುಗಳನ್ನು ವೇದನೆ ಸಂವೇದನೆಗಳನ್ನು ಬರಹ ಭಾಷಣ ಹಾಗೂ ಮತ್ತಿತರ ಮಾಧ್ಯಮಗಳ ಮೂಲಕ ವ್ಯಕ್ತಪಡಿಸುವ

ಸ್ವಾತಂತ್ರ್ಯ ಅಭಿವ್ಯಕ್ತಿ ಸ್ವಾತಂತ್ರ್ಯವಾಗಿದೆ. ಅದರಂತೆಯೇ ತನಗೆ ಇಷ್ಟವಿರುವ ನಂಬಿಕೆಗಳು ಮತ್ತು ಧರ್ಮಗಳಲ್ಲಿ ನಿಷ್ಠೆಯನ್ನಿಡುವ ಸ್ವಾತಂತ್ರ್ಯವು ನಂಬಿಕೆ ಮತ್ತು ಧರ್ಮ ಶ್ರದ್ಧೆಯ ಸ್ವಾತಂತ್ರ್ಯಕ್ಕೆ ಸಾಕ್ಷಿಯಾಗಿದೆ. ಅದರಂತೆಯೇ ಪೂಜಿಸುವ ಮತ್ತು ಪೂಜಿಸದಿರುವ ಸ್ವಾತಂತ್ರ್ಯವು ಕೂಡ ವ್ಯಕ್ತಿಗಿದೆ. ಇದೆಲ್ಲವು ವಿವಿಧ ಪ್ರಕಾರದ ಸ್ವಾತಂತ್ರ್ಯಗಳ ಅನುಭವಿಸುವಿಕೆಗೆ ಅವಕಾಶ ಮಾಡಿಕೊಟ್ಟಿದೆ.

9. **ಸಮಾನತೆ (Equality):**

ಸ್ವಾತಂತ್ರ್ಯದಂತೆಯೇ ಸಮಾನತೆಯು ಮುಖ್ಯ, ಇವೆರಡು ಒಂದೇ ನಾಣ್ಯದ ಎರಡು ಮುಖಗಳು. ಸಮಾನತೆ ಇಲ್ಲದ ಸ್ವಾತಂತ್ರ್ಯಕ್ಕೆ ಅರ್ಥವಿಲ್ಲ. ಯಾವುದೇ ಧರ್ಮ, ಜಾತಿ, ಲಿಂಗ, ಬಣ್ಣ ಮತ್ತು ವಾಸಸ್ಥಳ ಮುಂತಾದವುಗಳ ಆಧಾರದ ಮೇಲೆ ತಾರತಮ್ಯ ಮಾಡಬಾರದು ಎಂದು ತಿಳಿಸುವುದೇ ಸಮಾನತೆ. ಸಮಾನ ಸ್ಥಾನ ಮತ್ತು ಸಮಾನ ಅವಕಾಶಗಳು ಎಲ್ಲರಿಗೂ ದೊರೆಯಬೇಕೆಂಬುವುದೇ ಇದರ ಆಶಯವಾಗಿದೆ.

10. **ಭ್ರಾತೃತ್ವ (Fraternity):**

ವ್ಯಕ್ತಿಯ ಘನತೆ ಮತ್ತು ರಾಷ್ಟ್ರದ ಏಕತೆ ಹಾಗೂ ಸಮಗ್ರತೆಗೆ ಭ್ರಾತೃತ್ವ ಅತ್ಯಗತ್ಯ. ಭೂಮಿಯ ಮೇಲೆ ವಾಸಿಸುವ ಜನರೆಲ್ಲ ಮೇಲು-ಕೀಳು, ಬಡವ-ಬಲ್ಲಿದ, ಬಿಳಿಯ-ಕರಿಯ ಎಂಬ ಅಮಾನುಷ ಭೇದ ಭಾವನೆಗಳನ್ನು ಬೆಳೆಸಿಕೊಳ್ಳದೇ ಬದುಕುವುದು ಭ್ರಾತೃತ್ವ.

'ಎಲ್ಲರಲ್ಲಿಯು ಸಹೋದರತ್ವದ ಭಾವನೆಯನ್ನು ಕಾಣುವುದೇ ಭ್ರಾತೃತ್ವ.' ವ್ಯಕ್ತಿಗೆ ಘನತೆ ಮತ್ತು ಗೌರವಗಳು ಅತ್ಯಗತ್ಯವಾಗಿರುವುದರಿಂದ ಯಾವುದೇ ಬೇಧ ಭಾವ ಮಾಡಬಾರದು.

11. **ರಾಷ್ಟ್ರದ ಐಕ್ಯತೆ ಮತ್ತು ಭಾವೈಕ್ಯತೆ (Unity and Integrity):**

ಭಾರತದ ಸಂವಿಧಾನದಲ್ಲಿ 42 ನೇ ತಿದ್ದುಪಡಿ ಮೂಲಕ 1976 ರಲ್ಲಿ ಕೇಂದ್ರ ಸರ್ಕಾರವು ಐಕ್ಯತೆ ಎಂಬ ಪದವನ್ನು ಪ್ರಸ್ತಾವನೆಯಲ್ಲಿ ಸೇರಿಸಿತು. ವಿವಿಧ ಜಾತಿ ಧರ್ಮಗಳಿಗೆ ಸೇರಿದ ಜನರಿರುವ ಭಾರತದಲ್ಲಿ ಐಕ್ಯತೆಯನ್ನು ಮೂಡಿಸುವ ಅಗತ್ಯತೆಯನ್ನು ಮನಗಾಣಲಾಯಿತು. ರಾಜ್ಯಗಳ ಒಕ್ಕೂಟವಾದ ಭಾರತದಲ್ಲಿ ಐಕ್ಯತೆಯನ್ನು ಬೆಳೆಸುವುದಕ್ಕೋಸ್ಕರವೇ ಏಕ ಪೌರತ್ವವಿದೆ.

ಅದರಂತೆಯೇ ರಾಷ್ಟ್ರದಲ್ಲಿ ಭಾವೈಕ್ಯತೆಯನ್ನು ಬೆಳೆಸುವುದಕ್ಕಾಗಿ ರಾಷ್ಟ್ರದ ಸಂವಿಧಾನ, ರಾಷ್ಟ್ರಧ್ವಜ, ರಾಷ್ಟ್ರಗೀತೆನ್ನು ಗೌರವಿಸುವಂತಹ 11 ಮೂಲಭೂತ ಕರ್ತವ್ಯಗಳನ್ನು ಸಂವಿಧಾನದ 4 ನೇ ಎ ಭಾಗದಲ್ಲಿ 51 ಎ (ಎ) ಯಿಂದ 51 ಎ (ಕೆ) ವರೆಗೆ ಮೂಲಭೂತ ಕರ್ತವ್ಯಗಳನ್ನು ಸೇರಿಸಲಾಗಿದೆ. ಇವೆಲ್ಲವುಗಳು ಭಾರತದ ಪ್ರಜೆಗಳಲ್ಲಿ ಏಕತೆಯೊಂದಿಗೆ ಭಾವೈಕ್ಯತೆಯನ್ನು ವೃದ್ಧಿಸುತ್ತವೆ. ರಾಷ್ಟ್ರವನ್ನು ಕಟ್ಟುವ ಕಾರ್ಯದಲ್ಲಿ ಜನರಿಗೂ ಜವಾಬ್ದಾರಿಗಳಿವೆ ಎಂಬುದನ್ನು ನೆನಪಿಸುತ್ತವೆ.

ಒಟ್ಟಿನಲ್ಲಿ ಪ್ರಸ್ತಾವನೆಯು ಸಂವಿಧಾನದ ಕನ್ನಡಿಯಂತೆಯು ಮತ್ತು ಮುನ್ನುಡಿಯಂತೆಯು ಇದೆ. ಇದು ಭಾರತದ ರಾಜಕೀಯ ವ್ಯವಸ್ಥೆಯ ಪದ್ಧತಿ, ತತ್ವಗಳು, ಧ್ಯೇಯ ಗುರಿಗಳು ಮತ್ತು ಮೌಲ್ಯಗಳ ಸಾರಸತ್ವವಾಗಿದೆ. ಪ್ರಸ್ತಾವನೆಯಲ್ಲಿ ಉಲ್ಲೇಖಿತವಾದ

ತತ್ವಗಳು ಮತ್ತು ಧ್ಯೇಯ ಗುರಿಗಳನ್ನು ಕರಾರುವಕ್ಕಾಗಿ ಅನುಷ್ಠಾನಗೊಳಿಸಿ ಸಾಕಾರಗೊಳಿಸುವ ಜವಾಬ್ದಾರಿ ಆಡಳಿತಗಾರರೊಂದಿಗೆ ಪ್ರಜೆಗಳಾದ ನಮಗೂ ಇದೆ.

## ಅಭ್ಯಾಸ

I. **ಒಂದು ವಾಕ್ಯದಲ್ಲಿ ಉತ್ತರಿಸಿರಿ.**

1. ಪ್ರಸ್ತಾವನೆ ಎಂದರೇನು?
2. ಸಾರ್ವಭೌಮ ರಾಷ್ಟ್ರ ಎಂದರೇನು?
3. ಜಾತ್ಯಾತೀತತೆಯನ್ನು ಎಷ್ಟನೇ ತಿದ್ದುಪಡಿಯಿಂದ ಸೇರಿಸಲಾಯಿತು?
4. ಸಮಾಜವಾದವನ್ನು ಯಾವಾಗ ಅಳವಡಿಸಿಕೊಳ್ಳಲಾಯಿತು?
5. ಗಣರಾಜ್ಯ ಎಂದರೇನು?
6. ಭಾರತದ ಸಂವಿಧಾನವನ್ನು ಯಾವಾಗ ಅಳವಡಿಸಿಕೊಳ್ಳಲಾಯಿತು?
7. ಭಾರತದ ಸಂವಿಧಾನವು ಯಾವಾಗ ಜಾರಿಗೆ ಬಂದಿತು?
8. ರಚನಾ ಸಭೆಯಲ್ಲಿ ಧ್ಯೇಯ ನಿರ್ಣಯವನ್ನು ಯಾರು ಮಂಡಿಸಿದರು?
9. ಪ್ರಜಾಪ್ರಭುತ್ವ ಎಂದರೇನು?
10. ಪ್ರಸ್ತಾವನೆಯನ್ನು ಎಷ್ಟು ಸಲ ತಿದ್ದುಪಡಿ ಮಾಡಲಾಯಿತು?

II. **ಎರಡು ಅಥವಾ ಮೂರು ವಾಕ್ಯಗಳಲ್ಲಿ ಉತ್ತರಿಸಿ.**

1. ಜವಾಹರಲಾಲ್ ನೆಹರೂ ರವರು ಮಂಡಿಸಿದ ಧ್ಯೇಯ ನಿರ್ಣಯವನ್ನು ಬರೆಯಿರಿ.
2. ಪ್ರಸ್ತಾವನೆಯನ್ನು ವ್ಯಾಖ್ಯಾನಿಸಿ.
3. ನ್ಯಾಯದ ವಿಧಗಳನ್ನು ತಿಳಿಸಿ.
4. ಸಮಾನತೆ ಎಂದರೇನು?
5. ಭ್ರಾತೃತ್ವವನ್ನು ವ್ಯಾಖ್ಯಾನಿಸಿ.

III. **ನಾಲ್ಕು ಅಥವಾ ಐದು ವಾಕ್ಯಗಳಲ್ಲಿ ಉತ್ತರಿಸಿ.**

1. ಪ್ರಸ್ತಾವನೆಯ ಹಿನ್ನೆಲೆಯನ್ನು ತಿಳಿಸಿ.
2. ಪ್ರಸ್ತಾವನೆಯ ಮಹತ್ವವನ್ನು ತಿಳಿಸಿ.
3. ಪ್ರಸ್ತಾವನೆಯ ಮೂಲ ತತ್ವಗಳನ್ನು ತಿಳಿಸಿ.
4. ಪ್ರಸ್ತಾವನೆಯಲ್ಲಿರುವ ಧ್ಯೇಯ ಗುರಿಗಳನ್ನು ತಿಳಿಸಿ.
5. ರಾಷ್ಟ್ರದ ಐಕ್ಯತೆ ಮತ್ತು ಭಾವೈಕ್ಯತೆ ಕುರಿತು ಬರೆಯಿರಿ.
6. ವ್ಯಕ್ತಿ ಘನತೆ ಮತ್ತು ಭ್ರಾತೃತ್ವದ ಕುರಿತು ಬರೆಯಿರಿ.

IV. **ಕೆಳಗಿನ ವಾಕ್ಯಗಳಲ್ಲಿ ಖಾಲಿ ಬಿಟ್ಟಿರುವ ಜಾಗಗಳನ್ನು ಸೂಕ್ತ ಪದಗಳಿಂದ ತುಂಬಿರಿ.**

1. ಜವಾಹರಲಾಲ್ ನೆಹರು ರವರು ________ ದಿನಾಂಕದಂದು ಧ್ಯೇಯ ನಿರ್ಣಯವನ್ನು ಸಂವಿಧಾನ ರಚನಾ ಸಭೆಯಲ್ಲಿ ಮಂಡಿಸಿದರು.
2. ________ ರು ಪ್ರಸ್ತಾವನೆಯನ್ನು ಸಾರ್ವಭೌಮ ಪ್ರಜಾಸತಾತ್ಮಕ ಗಣರಾಜ್ಯದ ರಾಜಕೀಯ ಜಾತಕ ಎಂದು ವರ್ಣಿಸಿದರು.
3. ಪ್ರಸ್ತಾವನೆಯು ಸಂವಿಧಾನದ________ .

4. ಸಂವಿಧಾನ ರಚನಾ ಸಭೆಯು ಸೂಕ್ತ ಮಾರ್ಪಾಡಿನೊಂದಿಗೆ ಪ್ರಸ್ತಾವನೆಯನ್ನು ________ ದಿನಾಂಕ ದಂದು ಅಳವಡಿಸಿಕೊಂಡಿತು.
5. ಸ್ವಾತಂತ್ರ್ಯ ಮತ್ತು ಸಮಾನತೆ ಒಂದೇ ನಾಣ್ಯದ ________ ಮುಖಗಳಿದ್ದಂತೆ.

V. **ಎಂಟರಿಂದ ಹತ್ತು ವಾಕ್ಯಗಳಲ್ಲಿ ಉತ್ತರಿಸಿ.**

1. ಪ್ರಸ್ತಾವನೆಯ ಅರ್ಥ ಮಹತ್ವ ಮತ್ತು ಹಿನ್ನೆಲೆಯನ್ನು ಬರೆಯಿರಿ.
2. ಪ್ರಸ್ತಾವನೆಯ ಮುಖ್ಯಾಂಶಗಳನ್ನು ಕುರಿತು ಚರ್ಚಿಸಿ.
3. ಪ್ರಸ್ತಾವನೆಯನ್ನು ಯಥಾವತ್ತಾಗಿ ಬರೆಯಿರಿ.
4. ಭಾರತ ಸಂವಿಧಾನದ ಪ್ರಸ್ತಾವನೆಯನ್ನು ನೀವೇಕೆ ಮೆಚ್ಚಿಕೊಳ್ಳುವಿರಿ ಸಮರ್ಥಿಸಿ.

**ಸಲಹಾತ್ಮಕ ಚಟುವಟಿಕೆಗಳು:**

1. 'ಪ್ರಸ್ತಾವನೆ' ಯನ್ನು ಸ್ಪಷ್ಟವಾಗಿ ಓದಿಸುವುದು.
2. ಪ್ರಸ್ತಾವನೆಯ ಮೂಲತತ್ವಗಳು ಮತ್ತು ಧ್ಯೇಯಗಳನ್ನು ಪಟ್ಟಿ ಮಾಡುವುದು.

# ಅಧ್ಯಾಯ- 3 ಮೂಲಭೂತ ಹಕ್ಕುಗಳು ಮತ್ತು ಕರ್ತವ್ಯಗಳು (FUNDAMENTAL RIGHTS AND DUTIES)

## ಕಲಿಕೆಯ ಉದ್ದೇಶಗಳು:

1. ಮೂಲಭೂತ ಹಕ್ಕುಗಳ ಅರ್ಥ ಮತ್ತು ಅವಶ್ಯಕತೆಗಳ ಬಗ್ಗೆ ತಿಳಿದುಕೊಳ್ಳುವುದು.
2. ಭಾರತದ ಸಂವಿಧಾನವು ಪ್ರಜೆಗಳಿಗೆ ನೀಡಿದ ಮೂಲಭೂತ ಹಕ್ಕುಗಳು ಮತ್ತು ಅವುಗಳ ರಕ್ಷಣೆಯ ಕುರಿತು ಮನನ ಮಾಡಿಕೊಳ್ಳುವುದು.
3. ರಾಷ್ಟ್ರಕ್ಕೆ ಪ್ರಜೆಗಳು ಸಲ್ಲಿಸಬೇಕಾಗಿರುವ ಕರ್ತವ್ಯಗಳನ್ನು ಅರಿತು ಅವುಗಳನ್ನು ತಮ್ಮ ನಿತ್ಯ ಜೀವನದಲ್ಲಿ ಅಳವಡಿಸಿಕೊಳ್ಳಲು ಸಮರ್ಥರಾಗುವುದು.
4. ಮಕ್ಕಳ ಉಚಿತ ಮತ್ತು ಕಡ್ಡಾಯ ಶಿಕ್ಷಣ ಹಕ್ಕಿನ ಮಹತ್ವವನ್ನು ತಿಳಿದುಕೊಳ್ಳುವುದು.

“ಮಾನವ ತನ್ನ ಜೀವನದ ಪರಿಪೂರ್ಣತೆಯನ್ನು ಸಾಧಿಸಲು ರಾಜ್ಯ ಒದಗಿಸುವ ಸಾಮಾಜಿಕ ವಾತಾವರಣವೇ ಹಕ್ಕುಗಳು” **ಪ್ರೊ. ಹೆರಾಲ್ಡ್ ಜೆ. ಲಾಸ್ಕಿ**

## ಪೀಠಿಕೆ:

ವ್ಯಕ್ತಿಯ ವ್ಯಕ್ತಿತ್ವದ ಸರ್ವತೋಮುಖ ಬೆಳವಣಿಗೆಗೆ ಅಗತ್ಯವಾದ ಅಂಶಗಳೆಲ್ಲವೂ ಹಕ್ಕುಗಳಾಗಿವೆ. ಅದರಂತೆಯೇ ಸಂವಿಧಾನದಲ್ಲಿ ಬರೆಯಲ್ಪಟ್ಟು ನ್ಯಾಯಾಂಗದಿಂದ ರಕ್ಷಿಸಲ್ಪಡುವ ಹಕ್ಕುಗಳೆಲ್ಲವನ್ನು ಮೂಲಭೂತ ಹಕ್ಕುಗಳೆಂದು ಕರೆಯಲಾಗುತ್ತದೆ. ನಮ್ಮ ಸಂವಿಧಾನದ ಮೂರನೇ ಭಾಗದಲ್ಲಿ 12 ರಿಂದ 35 ನೇ ವಿಧಿಯವರೆಗೆ ಮೂಲಭೂತ ಹಕ್ಕುಗಳನ್ನು ವಿವರಿಸಲಾಗಿದೆ. ಈ ಮೂಲಭೂತ ಹಕ್ಕುಗಳು ಅಮೂಲ್ಯವಾದವುಗಳಾಗಿರುವುದರಿಂದ ನಮ್ಮ ಸಂವಿಧಾನದ “ಮ್ಯಾಗ್ನಕಾರ್ಟ” ಎಂದು ಕರೆಯಲಾಗಿದೆ. ಇಂಥಹ ಮೂಲಭೂತ ಹಕ್ಕುಗಳ ಪರಿಜ್ಞಾನವು ಪ್ರಜೆಗಳಾದ ನಮಗೆ ಅತ್ಯಗತ್ಯ.

ಕ್ರಿ. ಶ. 1215 ರಲ್ಲಿ ಇಂಗ್ಲೆಂಡಿನ ಜಾನ್ ದೊರೆ ಅಲ್ಲಿನ ಪ್ರಜೆಗಳಿಗೆ ನೀಡಿದ್ದು ಹಕ್ಕುಗಳ ಸನ್ನದ್ದನ್ನು ಮ್ಯಾಗ್ನಕಾರ್ಟ ಎಂದು ಕರೆಯಲಾಯಿತು.

ವುಡ್ರೋವಿಲ್ಸನ್ ರವರ ಪ್ರಕಾರ ನಿರ್ದಿಷ್ಟ ಭೂಪ್ರದೇಶದಲ್ಲಿ ಕಾನೂನಿನ ಪರಿಮಿತಿಗೆ ಒಳಪಟ್ಟು ಸಂಘಟಿತವಾದ ಜನಸಮೂಹವೇ ರಾಜ್ಯ. ರಾಜ್ಯವು ತನ್ನ ಪ್ರಜೆಗಳ ಆಸ್ತಿ-ಪಾಸ್ತಿ, ಪ್ರಾಣ ಮತ್ತು ಸ್ವಾತಂತ್ರ್ಯವನ್ನು ಸದಾ ರಕ್ಷಿಸುತ್ತದೆ. ಇದಕ್ಕಾಗಿಯೇ ಅದು ಪ್ರಜೆಗಳಿಗೂ ಕೆಲವೊಂದು ಮೂಲಭೂತ ಸೌಲಭ್ಯಗಳನ್ನು ಒದಗಿಸದೆ ರಾಜ್ಯವೆಂಬ ವ್ಯವಸ್ಥೆಯಲ್ಲಿ ಪ್ರಜೆಗಳಿಗೆ ಸಂವಿಧಾನದ ಮೂಲಕ ದೊರಕುವ ಅವಶ್ಯಕತೆಗಳನ್ನು ಮೂಲಭೂತ ಹಕ್ಕುಗಳೆನ್ನಬಹುದು. ಪ್ರೊ. ಹೆಚ್. ಜೆ. ಲಾಸ್ಕಿ ಯವರು ಒಂದು ರಾಜ್ಯದ ದಕ್ಷತೆಯನ್ನು ಅದು ತನ್ನ ಜನತೆಗೆ ನೀಡಿರುವ ಹಕ್ಕುಗಳಿಂದ ತಿಳಿಯಬಹುದು ಎಂದು ಅಭಿಪ್ರಾಯ ಪಟ್ಟಿದ್ದಾರೆ.

## ವ್ಯಾಖ್ಯೆಗಳು:

1. ಬೊಸಾಂ ಕೆಟ್: "ಸಮಾಜದಿಂದ ಮಾನ್ಯತೆ ಪಡೆದ ರಾಜ್ಯದಿಂದ ಅನುಷ್ಠಾನಗೊಳಿಸಲ್ಪಟ್ಟ ನಿಯಮಗಳೇ ಹಕ್ಕುಗಳು"
2. ಡಿ. ಡಿ. ಬಸು: "ಲಿಖಿತ ಸಂವಿಧಾನದಲ್ಲಿ ನಮೂದಿಸಿ ರಕ್ಷಿಸಲ್ಪಡುವ ಹಕ್ಕುಗಳನ್ನು ಮೂಲಭೂತ ಹಕ್ಕುಗಳೆಂದು ಕರೆಯಬಹುದು".

ಮೂಲಭೂತ ಹಕ್ಕುಗಳನ್ನು ಸಂಸತ್ತು, ವಿಧಾನಸಭೆ ಅಥವಾ ಯಾವುದೇ ಸಾರ್ವಜನಿಕ ಸಂಸ್ಥೆ ಕಾನೂನಿನ ಮೂಲಕ ಮೊಟಕುಗೊಳಿಸುವಂತಿಲ್ಲ ಇವು ನ್ಯಾಯಾಲಯಗಳಿಂದ ರಕ್ಷಿಸಲ್ಪಡುತ್ತವೆ.

## ಐತಿಹಾಸಿಕ ಹಿನ್ನಲೆ:

ಮೂಲಭೂತ ಹಕ್ಕುಗಳಿಗೆ ಅವುಗಳದೇ ಆದ ಕುತೂಹಲಕಾರಿ ಇತಿಹಾಸವಿದೆ. ಜಗತ್ತಿನ ಚರಿತ್ರೆಯಲ್ಲಿ ವಿಶಿಷ್ಟ ಸ್ಥಾನ ಪಡೆದಿರುವ ಅಮೇರಿಕಾ, ಫ್ರಾನ್ಸ್, ರಷ್ಯಾ ಕ್ರಾಂತಿಗಳು ಮತ್ತು ಭಾರತದ ರಾಷ್ಟ್ರೀಯ ಚಳುವಳಿಗಳೆಲ್ಲವೂ ಹಕ್ಕುಗಳಿಗಾಗಿ ನಡೆದ ಜ್ವಲಂತ ಹೋರಾಟಗಳೇ ಆಗಿವೆ. ಲೋಕಮಾನ್ಯ ಬಾಲಗಂಗಾಧರ ತಿಲಕ್‌ರವರು 1895 ರಲ್ಲಿ 'ಸ್ವರಾಜ್ಯ' ಮಸೂದೆಯಲ್ಲಿ ಪ್ರಥಮಬಾರಿಗೆ ಮೂಲಭೂತ ಹಕ್ಕುಗಳನ್ನು ಪ್ರಸ್ತಾಪಿಸಿದರು. 1928 ರಲ್ಲಿ ನೆಹರೂ ತಮ್ಮ ವರದಿಯಲ್ಲಿ ಮೂಲಭೂತ ಹಕ್ಕುಗಳಿಗೆ ಹೆಚ್ಚಿನ ಪ್ರಮುಖ್ಯತೆಯನ್ನು ನೀಡಿರುತ್ತಾರೆ. (ಮೋತಿಲಾಲ್ ನೆಹರೂರವರ ನೇತೃತ್ವದಲ್ಲಿ ಈ ಸಮಿತಿಯನ್ನು ರಚಿಸಲಾಗಿತ್ತು) 1931 ರಲ್ಲಿ ಭಾರತೀಯ ರಾಷ್ಟ್ರೀಯ ಕಾಂಗ್ರೆಸ್‌ನ ಕರಾಚಿ ಅಧಿವೇಶನದಲ್ಲಿ ಮೂಲಭೂತ ಹಕ್ಕುಗಳ ಗೊತ್ತುವಳಿಯನ್ನು ಮಂಡಿಸಲಾಗಿತ್ತು. ಸಂವಿಧಾನ ರಚನಾ ಸಭೆಯಲ್ಲಿ ಸರ್ದಾರ್ ವಲ್ಲಭಭಾಯಿ ಪಟೇಲರ ನೇತೃತ್ವದಲ್ಲಿ ಉಪಸಮಿತಿಯನ್ನು ರಚಿಸಲಾಯಿತು. ನಮ್ಮ ಸಂವಿಧಾನದಲ್ಲಿ ಉಲ್ಲೇಖಿಸಿರುವ ಮೂಲಭೂತ ಹಕ್ಕುಗಳನ್ನು ಅಮೇರಿಕಾ ಸಂಯುಕ್ತ ಸಂಸ್ಥಾನದ ಸಂವಿಧಾನದ ಹಕ್ಕುಗಳ ಯಾದಿಯಿಂದ ಎರವಲು ಪಡೆದುಕೊಳ್ಳಲಾಗಿದೆ. ಇದರಲ್ಲಿ ಫ್ರಾನ್ಸಿನ ಮಾನವ ಹಕ್ಕುಗಳ ಘೋಷಣೆ, ವಿಶ್ವಸಂಸ್ಥೆ ಹೊರಡಿಸಿದ ಮಾನವ ಹಕ್ಕುಗಳ ಘೋಷಣೆ ಮತ್ತು 1935 ರ ಐರಿಷ್ ಸಂವಿಧಾನಗಳ ಪ್ರಭಾವವನ್ನು ಕಾಣಬಹುದಾಗಿದೆ. ಸ್ವತಂತ್ರ ಭಾರತ ತನ್ನ ಸಂವಿಧಾನವನ್ನು ರಚಿಸುವಾಗ ಮೂಲಭೂತ ಹಕ್ಕುಗಳಿಗಾಗಿಯೇ ಒಂದು ಅಧ್ಯಾಯವನ್ನು ಮೀಸಲಿಟ್ಟಿತ್ತು.

ಭಾರತದ ಸಂವಿಧಾನ 12 ರಿಂದ 35 ರವರೆಗಿನ ವಿಧಿಗಳು ಮೂಲಭೂತ ಹಕ್ಕುಗಳಿಗೆ ಸಂಬಂಧಿಸಿವೆ. 12 ನೇ ವಿಧಿಯಲ್ಲಿ ಬಳಸಿರುವ "ರಾಜ್ಯ" ಎಂಬ ಪದಕ್ಕೆ ವಿಶಾಲ ಅರ್ಥವಿದೆ. ರಾಜ್ಯ ಎಂದರೆ ಕೇಂದ್ರ ಸರ್ಕಾರ, ರಾಜ್ಯ ಸರ್ಕಾರ, ಸ್ಥಳೀಯ ಸರ್ಕಾರಗಳು ಮತ್ತು ಇತರ ಪ್ರಾಧಿಕಾರಗಳೆಂದಾಗುತ್ತದೆ. ಇವು ಯಾವುವೂ ಕೂಡಾ ಮೂಲಭೂತ ಹಕ್ಕುಗಳನ್ನು ಅನಗತ್ಯವಾಗಿ ಉಲ್ಲಂಘಿಸುವಂತಿಲ್ಲ ಆದಾಗ್ಯೂ ಮೂಲಭೂತ ಹಕ್ಕುಗಳಿಗೆ ಕೆಲವು ಇತಿ-ಮಿತಿಗಳನ್ನು ಹೇರುವ ಅಥವಾ ತಿದ್ದುಪಡಿ ಮಾಡುವ, ವಿಶೇಷ ಸಂದರ್ಭಗಳಲ್ಲಿ ಇವುಗಳನ್ನು ಹಿಂದಕ್ಕೆ ಪಡೆಯುವ ಅಧಿಕಾರ ಸಂಸತ್ತಿಗಿದೆ. ಸಂವಿಧಾನಾತ್ಮಕ ಪರಿಹಾರದ ಹಕ್ಕು ಸಹ ಒಂದು ಮೂಲಭೂತ ಹಕ್ಕು ಆಗಿರುವುದು ಒಂದು ಗಮನಾರ್ಹ ಅಂಶವಾಗಿದೆ. ಇದರಿಂದಾಗಿ ತನ್ನ ಮೂಲಭೂತ ಹಕ್ಕಿಗೆ ಧಕ್ಕೆಯುಂಟಾದಾಗ ಪ್ರಜೆಯು ನೇರವಾಗಿ ಸರ್ವೋಚ್ಚ

ನ್ಯಾಯಾಲಯ (32 ನೇ ವಿಧಿಯ ಮೇರೆಗೆ) ಅಥವಾ ರಾಜ್ಯಗಳ ಉಚ್ಚ ನ್ಯಾಯಾಲಯಗಳ (226 ನೇ ವಿಧಿಯ ಮೇರೆಗೆ) ಮೊರೆ ಹೋಗಬಹುದು.

### ಮೂಲಭೂತ ಹಕ್ಕುಗಳ ಲಕ್ಷಣಗಳು:

1. ನಿರಂಕುಶವಾದವುಗಳು.
2. ಅನುಷ್ಠಾನ ಯೋಗ್ಯವಾದವುಗಳು.
3. ನ್ಯಾಯ ನಿರ್ದೇಶಿತವಾದವುಗಳು
4. ನಿರ್ಬಂಧಿತವಾದವುಗಳು.

ಭಾರತೀಯರಂತೆ ವಿದೇಶಿಯರು ಕೂಡಾ ಕೆಲವು ಮೂಲಭೂತ ಹಕ್ಕುಗಳನ್ನು ಏಕ ರೀತಿಯಲ್ಲಿ ಅನುಭವಿಸಬಹುದಾಗಿದೆ.

ಉದಾಹರಣೆ: ಸಮಾನತೆ, ವ್ಯಕ್ತಿ ಸ್ವಾತಂತ್ರ್ಯದ ರಕ್ಷಣೆ, ಶೋಷಣೆಯ ವಿರುದ್ಧ ರಕ್ಷಣೆ, ಕಾನೂನಿನ ಮುಂದೆ ಸಮಾನತೆ ಇತ್ಯಾದಿ.

### ಮೂಲಭೂತ ಹಕ್ಕುಗಳು:

1950 ಜನವರಿ 26 ರಂದು ಜಾರಿಗೆ ಬಂದ ನಮ್ಮ ಸಂವಿಧಾನದಲ್ಲಿ ಏಳು ಮೂಲಭೂತ ಹಕ್ಕುಗಳ ಉಲ್ಲೇಖವಿದೆ. ಅವುಗಳೆಂದರೆ;

1. ಸಮಾನತೆಯ ಹಕ್ಕು (14 ರಿಂದ 18 ನೇ ವಿಧಿ)
2. ಸ್ವಾತಂತ್ರ್ಯದ ಹಕ್ಕು (19 ರಿಂದ 22 ನೇ ವಿಧಿ)
3. ಶೋಷಣೆಯ ವಿರುದ್ಧದ ಹಕ್ಕು (23 ಮತ್ತು 24 ನೇ ವಿಧಿ)
4. ಧಾರ್ಮಿಕ ಸ್ವಾತಂತ್ರ್ಯದ ಹಕ್ಕು (25 ರಿಂದ 28 ನೇ ವಿಧಿ)
5. ಸಾಂಸ್ಕೃತಿಕ ಮತ್ತು ಶೈಕ್ಷಣಿಕ ಹಕ್ಕು (29 ಮತ್ತು 30 ನೇ ವಿಧಿ)
6. ಆಸ್ತಿಯ ಹಕ್ಕು (31 ನೇ ವಿಧಿ) ಮತ್ತು
7. ಸಂವಿಧಾನಾತ್ಮಕ ಪರಿಹಾರದ ಹಕ್ಕು (32 ನೇ ವಿಧಿ)

1978 ರಲ್ಲಿ ಸಂವಿಧಾನಕ್ಕೆ ತಂದ 44 ನೇ ತಿದ್ದುಪಡಿಯ ಮೂಲಕ ಆಸ್ತಿಯ ಹಕ್ಕನ್ನು ಮೂಲಭೂತ ಹಕ್ಕುಗಳ ಪಟ್ಟಿಯಿಂದ ತೆಗೆದು ಹಾಕಲಾಯಿತು. ಅಂದಿನಿಂದ ಆಸ್ತಿಯ ಹಕ್ಕು ಸಂವಿಧಾನದ 12 ನೇ ಭಾಗದ 300 (ಎ) ವಿಧಿಯಲ್ಲಿ ಶಾಸನಾತ್ಮಕ ಹಕ್ಕಾಗಿ ಉಳಿದಿದೆ. ಆದುದರಿಂದ ಪ್ರಸ್ತುತ ಮೂಲಭೂತ ಹಕ್ಕುಗಳ ಸಂಖ್ಯೆ ಆರು ಆಗಿವೆ. ರಾಷ್ಟ್ರೀಯ ತುರ್ತುಪರಿಸ್ಥಿತಿ ಅಥವಾ ಬಾಹ್ಯ ಆಕ್ರಮಣದ ಸಂದರ್ಭದಲ್ಲಿ ಮಾತ್ರ ಇವುಗಳನ್ನು ನಿರ್ಬಂಧಿಸಬಹುದಾಗಿದೆ.

#### *1. ಸಮಾನತೆಯ ಹಕ್ಕು:*

ಕಾನೂನಿನ ದೃಷ್ಟಿಯಲ್ಲಿ ನಾವೆಲ್ಲರೂ ಸಮಾನರು. ಸಂವಿಧಾನ ನಮಗೆಲ್ಲರಿಗೂ ಸಮಾನ ರಕ್ಷಣೆಯನ್ನು ನೀಡುತ್ತದೆ. ಯಾವ ವ್ಯಕ್ತಿಯನ್ನೇ ಆಗಲಿ, ಆತನ ಜಾತಿ, ಕುಲ, ಲಿಂಗ, ಹುಟ್ಟಿದ ಸ್ಥಳ ಮತ್ತು ಮತ ಧರ್ಮಗಳ ಆಧಾರದ ಮೇಲೆ ತಾರತಮ್ಯಕ್ಕೆ ಗುರಿಪಡಿಸುವಂತಿಲ್ಲ. ಭಾರತೀಯ ಪೌರರಾದ ನಮಗೆ ಸಂವಿಧಾನ ವಿವಿಧ ಸಮಾನತೆಯ ಹಕ್ಕುಗಳನ್ನು ನೀಡಿದೆ. ಇವುಗಳನ್ನು ಅರಿತುಕೊಂಡು ಪಾಲಿಸುವುದು ನಮ್ಮ ಪೌರತ್ವಕ್ಕೆ ಭೂಷಿತವಾಗಿವೆ.

ಎ) 14 ನೇ ವಿಧಿಯು ಭಾರತದ ಪ್ರತಿಯೊಬ್ಬ ಪ್ರಜೆಯು ಕಾನೂನಿನ ಮುಂದೆ ಸಮಾನ ಹಾಗೂ ಪ್ರತಿಯೊಬ್ಬರಿಗೂ ಸಮಾನ ರಕ್ಷಣೆಯನ್ನು ದೃಢಪಡಿಸಿದೆ.

ಬಿ) 15 ನೇ ವಿಧಿಯು ಲಿಂಗ, ಜಾತಿ, ಧರ್ಮ, ಜನಾಂಗ ಮತ್ತು ಹುಟ್ಟಿದ ಸ್ಥಳ ಇವುಗಳ ಆಧಾರದ ಮೇಲೆ ತಾರತಮ್ಯ ಮಾಡುವುದನ್ನು ನಿರ್ಬಂಧಿಸಿದೆ.

ಸಿ) 16 ನೇ ವಿಧಿಯು ಸಾರ್ವಜನಿಕ ಉದ್ಯೋಗಾವಕಾಶಗಳನ್ನು ನೀಡುವಾಗ ಯಾವುದೇ ತಾರತಮ್ಯ ಮಾಡುವುದನ್ನು ನಿರ್ಬಂಧಿಸಿದೆ.

ಡಿ) 17 ನೇ ವಿಧಿಯು ಅಸ್ಪೃಶ್ಯತಾ ಆಚರಣೆ ಮತ್ತು ಆಚರಣೆಗೆ ಪ್ರೋತ್ಸಾಹ ನೀಡುವುದು ಶಿಕ್ಷಾರ್ಹ ಅಪರಾಧ ಎಂದು ಘೋಷಿಸಿದೆ.

ಇ) 18 ನೇ ವಿಧಿಯು ಸೈನಿಕ ಮತ್ತು ಶೈಕ್ಷಣಿಕ ಕ್ಷೇತ್ರಗಳನ್ನು ಹೊರತುಪಡಿಸಿ ಮತ್ತಾವುದೇ ಬಿರುದು ನೀಡುವುದನ್ನು ನಿಷೇಧಿಸುತ್ತದೆ. ಅಲ್ಲದೆ ಭಾರತ ಸರ್ಕಾರದ ಅನುಮತಿ ಇಲ್ಲದೆ ವಿದೇಶಗಳಿಂದ ಬಿರುದುಗಳನ್ನು ಸ್ವೀಕರಿಸುವುದನ್ನು ನಿಷೇಧಿಸುತ್ತದೆ.

### *2. ಸ್ವಾತಂತ್ರ್ಯದ ಹಕ್ಕು:*

ಮಾನವನ ವ್ಯಕ್ತಿತ್ವದ ವಿಕಾಸಕ್ಕೆ ಸ್ವಾತಂತ್ರ್ಯ ಅಗತ್ಯ, ಸ್ವಾತಂತ್ರ್ಯವಿಲ್ಲದ ವ್ಯಕ್ತಿಯ ಜೀವನ ಅರ್ಥಹೀನವಾದುದು. ಸ್ವಾತಂತ್ರ್ಯದ ಹಕ್ಕು ಮೂಲಭೂತ ಹಕ್ಕುಗಳ ಅಧ್ಯಾಯದ ಬೆನ್ನೆಲುಬಿನಂತಿದೆ. ಇವುಗಳಲ್ಲಿಯೂ 19 ನೇ ವಿಧಿಯು ಜನಸ್ತೋಮದ ಜೀವಾಳವಾಗಿದೆ. ಏಕೆಂದರೆ ಪ್ರಜಾಪ್ರಭುತ್ವದ ಬೆಳವಣಿಗೆಗೆ ಬೇಕಾದ ಆರು ಬಗೆಯ ಸ್ವಾತಂತ್ರ್ಯಗಳನ್ನು ಇಲ್ಲಿ ನಮೂದಿಸಲಾಗಿದೆ. ಪ್ರಜೆಗಳಾದ ನಾವು ಈ ವಿಧಿಯನ್ವಯ ಕೆಳಕಂಡ ಸ್ವಾತಂತ್ರ್ಯಗಳನ್ನು ಅನುಭವಿಸುವ ಹಕ್ಕನ್ನು ಪಡೆದಿದ್ದೇವೆ. ಅವುಗಳೆಂದರೆ.

a. ವಾಕ್ ಸ್ವಾತಂತ್ರ್ಯ ಹಾಗೂ ಅಭಿವ್ಯಕ್ತಿ ಸ್ವಾತಂತ್ರ್ಯ
b. ಶಾಂತವಾಗಿ ಮತ್ತು ಶಸ್ತ್ರರಹಿತವಾಗಿ ಸಭೆ ಸೇರುವ ಸ್ವಾತಂತ್ರ್ಯ
c. ಸಂಘ ಸಂಸ್ಥೆಗಳನ್ನು ಸ್ಥಾಪಿಸುವ ಸ್ವಾತಂತ್ರ್ಯ
d. ಭಾರತದಾದ್ಯಂತ ಸಂಚರಿಸುವ ಸ್ವಾತಂತ್ರ್ಯ
e. ಭಾರತದ ಯಾವುದೇ ಭಾಗದಲ್ಲಿ ವಾಸಿಸುವ ಸ್ವಾತಂತ್ರ್ಯ
f. ಆಸ್ತಿಯನ್ನು ಸಂಪಾದಿಸುವ ಸ್ವತಂತ್ರ್ಯ- 44 ನೇ ತಿದ್ದುಪಡಿಯ ಮೂಲಕ ಇದ್ದನ್ನು ರದ್ದುಗೊಳಿಸಲಾಯಿತು.
g. ಕಾನೂನು ಮಾನ್ಯ ಮಾಡಿರುವ ಯಾವುದೇ ವ್ಯಾಪಾರ ಮತ್ತು ಉದ್ಯೋಗ ನಿರ್ವಹಿಸುವ ಸ್ವಾತಂತ್ರ್ಯ

ಮೇಲಿನ ಸ್ವಾತಂತ್ರ್ಯಗಳು ಪ್ರಜಾಪ್ರಭುತ್ವದ ಮೌಲ್ಯಗಳ, ವ್ಯೆಯಕ್ತಿಕ ಶ್ರೇಷ್ಠತೆಯ ಮತ್ತು ರಾಷ್ಟ್ರದ ಏಕತೆಯ ಸಂಕೇತಗಳಾಗಿವೆ. ವಿಧಿ 20 ನೇ ವಿಧಿಯು ಅಪರಾಧಿಗೆ ನಿರಂಕುಶ ಮತ್ತು ಹೆಚ್ಚು ಶಿಕ್ಷೆಯ ವಿರುದ್ಧ ರಕ್ಷಣೆ ನೀಡುತ್ತದೆ. ವಿಧಿ 21 ವೈಯಕ್ತಿಕ ಸ್ವಾತಂತ್ರ್ಯ ಮತ್ತು ಜೀವ ಸ್ವಾತಂತ್ರ್ಯದ ಹಕ್ಕನ್ನು ನೀಡುತ್ತದೆ.

21 (ಎ) ವಿಧಿ ಉಚಿತ ಮತ್ತು ಕಡ್ಡಾಯ ಶಿಕ್ಷಣದ ಹಕ್ಕಿನ ಕುರಿತು ತಿಳಿಸುತ್ತದೆ. ಈ ವಿಧಿಯನ್ನು 2002 ರಲ್ಲಿ 86 ನೇಯ ತಿದ್ದುಪಡಿ ಶಾಸನದನ್ವಯ ಸೇರ್ಪಡೆಗೊಳಿಸಲಾಗಿದೆ.

*3. ಶೋಷಣೆಯ ವಿರುದ್ಧದ ಹಕ್ಕು:*

ಮನುಷ್ಯ ಮನುಷ್ಯನನ್ನು ಪಶುವಿಗಿಂತಲೂ ಕೀಳಾಗಿ ಕಾಣುವುದನ್ನು ತಪ್ಪಿಸಿ, ವ್ಯಕ್ತಿಯ ಘನತೆ ಮತ್ತು ಆತ್ಮಗೌರವವನ್ನು ಕಾಪಾಡುವುದಕ್ಕಾಗಿ ಈ ಹಕ್ಕುಗಳನ್ನು ಸಂವಿಧಾನದಲ್ಲಿ ಸೇರಿಸಲಾಗಿದೆ. ನಮ್ಮ ಸಂವಿಧಾನದ 23 ನೇ ವಿಧಿಯು ಬಲವಂತದ ದುಡಿಮೆ, ಗುಲಾಮಗಿರಿ ಹಾಗೂ ಮಹಿಳೆಯರು ಮತ್ತು ಮಕ್ಕಳನ್ನು ಅನೈತಿಕ ವ್ಯವಹಾರಕ್ಕೆ ಬಳಸುವುದನ್ನು ನಿಷೇಧಿಸಿದೆ. 24 ನೇ ವಿಧಿಯು 14 ವರ್ಷಕ್ಕಿಂತ ಕಡಿಮೆ ವಯಸ್ಸಿನ ಮಕ್ಕಳನ್ನು ಕಾರ್ಖಾನೆ, ಗಣಿಗಾರಿಕೆ ಮುಂತಾದ ಅಪಾಯಕಾರಿ ದುಡಿಮೆಗಳಲ್ಲಿ ತೊಡಗಿಸುವುದನ್ನು ನಿಷೇಧಿಸಿದೆ. ಶೋಷಣೆಯನ್ನು ತಡೆಗಟ್ಟಲು ಕೇಂದ್ರ ಮತ್ತು ರಾಜ್ಯ ಸರ್ಕಾರಗಳು ಅನೇಕ ಕಾಯ್ದೆಗಳನ್ನು ಜಾರಿಗೆ ತಂದಿದೆ. ಉದಾಹರಣೆಗೆ ಅನೈತಿಕ ವ್ಯವಹಾರ ತಡೆ ಕಾಯ್ದೆ, ಜೀತ ಪದ್ಧತಿ (ರದ್ದು) ಕಾಯ್ದೆ, ಬಾಲ ಕಾರ್ಮಿಕ ನಿಷೇಧ ಕಾಯ್ದೆ ಇತ್ಯಾದಿ.

*4. ಧಾರ್ಮಿಕ ಸ್ವಾತಂತ್ರ್ಯದ ಹಕ್ಕು:*

ಪರಧರ್ಮ ಸಹಿಷ್ಣುತೆ ಭಾರತೀಯ ಸಂಸ್ಕೃತಿಯ ವೈಶಿಷ್ಟವಾಗಿದೆ. ಈ ತತ್ವಕ್ಕೆ ಬದ್ಧವಾಗಿ ನಮ್ಮ ಸಂವಿಧಾನವು ಎಲ್ಲಾ ಧರ್ಮದವರಿಗೂ ಧಾರ್ಮಿಕ ಸ್ವಾತಂತ್ರ್ಯವನ್ನು ನೀಡಿದೆ. ಭಾರತ ಸರ್ವಧರ್ಮಗಳ ರಾಷ್ಟ್ರವಾಗಿದೆ. ಸಾರ್ವಜನಿಕ ಶಾಂತಿ, ಆರೋಗ್ಯ, ರಕ್ಷಣೆ ಮತ್ತು ನೈತಿಕ ತತ್ವಗಳಿಗೆ ಚ್ಯುತಿ ಬಾರದಂತೆ ಧಾರ್ಮಿಕ ಸ್ವಾತಂತ್ರ್ಯವನ್ನು ಅನುಭವಿಸುವುದಕ್ಕೆ ಅವಕಾಶವಿದೆ.

25 ನೇ ವಿಧಿಯನ್ವಯ ಪ್ರತಿಯೊಬ್ಬ ಭಾರತೀಯ ಪೌರನೂ ತನ್ನ ಆತ್ಮಸಾಕ್ಷಿಗನುಗುಣವಾಗಿ ತನಗೆ ಸರಿ ಎನಿಸಿದ ಧರ್ಮವನ್ನು ಸ್ವೀಕರಿಸುವ, ಅನುಸರಿಸುವ, ಪ್ರಚಾರ ಮಾಡುವ ಸ್ವಾತಂತ್ರ್ಯವನ್ನು ಹೊಂದಿರುತ್ತಾನೆ. 25 (1) ನೇ ವಿಧಿಯು ಧರ್ಮಪ್ರಚಾರಕ್ಕೆ ಇರುವ ಸ್ವಾತಂತ್ರ್ಯದ ಹೆಸರಿನಲ್ಲಿ ಬೇರೆಯವರನ್ನು ಒತ್ತಾಯಪೂರ್ವಕವಾಗಿ ಮತಾಂತರ ಗೊಳಿಸುವುದನ್ನು ನಿಷೇಧಿಸಿದೆ.

ಆತ್ಮ ಸಾಕ್ಷಿ ಸ್ವಾತಂತ್ರ್ಯ

ಆತ್ಮ ಸಾಕ್ಷಿ ಸ್ವಾತಂತ್ರ್ಯದ ಬಗ್ಗೆ ಸರ್ವೋಚ್ಚ ನ್ಯಾಯಾಲಯ 1986 ರಲ್ಲಿ ತನ್ನ ಅಭಿಪ್ರಾಯವನ್ನು ತಿಳಿಸಿ, 25ನೇ ವಿಧಿಯಲ್ಲಿರುವ ಹಕ್ಕನ್ನು ಎತ್ತಿ ಹಿಡಿದಿದೆ.

ಕೇರಳ ರಾಜ್ಯದ ಶಾಲೆಯೊಂದರಲ್ಲಿ 'ಜೆಹೊವಾ' ಪಂಥಕ್ಕೆ ಸೇರಿದ ಮಕ್ಕಳು, ತಮ್ಮ ಧರ್ಮಕ್ಕೆ ಅನುಗುಣವಾಗಿ ರಾಷ್ಟ್ರಗೀತೆಯನ್ನು ಹಾಡಲಿಲ್ಲ. ಪರಿಣಾಮವಾಗಿ ಈ ಮಕ್ಕಳನ್ನು ಶಾಲೆಯಿಂದ ಹೊರಕ್ಕೆ ಹಾಕಲಾಯಿತು. ಈ ಕ್ರಮವನ್ನು ಕೇರಳದ ಉಚ್ಚನ್ಯಾಯಾಲಯ ಸಮರ್ಥಿಸಿದಾಗ, ಸುಪ್ರೀಂ ಕೋರ್ಟಿಗೆ ಅಪೀಲನ್ನು ಸಲ್ಲಿಸಲಾಯಿತು. ಅಲ್ಲಿ ನ್ಯಾಯಾಧೀಶರಾಗಿದ್ದ ಓ. ಚಿನ್ನಪ್ಪರೆಡ್ಡಿ ಮತ್ತು ಎಂ. ಎಂ. ದತ್ ರವರು ಶಾಲೆಯು ನೀಡಿದ್ದ ಉಚ್ಚಾಟನೆ ಆದೇಶವನ್ನು ಮತ್ತು ಕೇರಳ ಹೈಕೋರ್ಟಿನ ತೀರ್ಪನ್ನು ಅನೂರ್ಜಿತ ಗೊಳಿಸಿದರು. ಮಕ್ಕಳನ್ನು ಶಾಲೆಯಿಂದ ಹೊರಕ್ಕೆ ಹಾಕಿದ್ದು 25 ನೇ ವಿಧಿಗೆ ವಿರುದ್ಧವಾದುದೆಂದು ಸರ್ವೋಚ್ಚನ್ಯಾಯಾಲಯ ತಿಳಿಸಿತು. ವಿಧಿ 26 ಧಾರ್ಮಿಕ ವ್ಯವಹಾರಗಳ ನಿರ್ವಹಣೆಗೆ ಸಂಬಂಧಿಸಿದೆ. ವಿಧಿ 27 ಧಾರ್ಮಿಕ ಸಂಸ್ಥೆಗಳಿಗೆ ತೆರಿಗೆ ವಿನಾಯಿತಿ

ಬಗ್ಗೆ ತಿಳಿಸುತ್ತದೆ. 28 ನೇ ವಿಧಿಯು ಸರ್ಕಾರದ ಪೂರ್ಣ ಧನಸಹಾಯದಿಂದ ನಡೆಸಲ್ಪಡುವ ಶೈಕ್ಷಣಿಕ ಸಂಸ್ಥೆಗಳಲ್ಲಿ ಧಾರ್ಮಿಕ ವಿಷಯ ಬೋಧಿಸುವುದನ್ನು ನಿಷೇಧಿಸುತ್ತದೆ.

*5. ಸಾಂಸ್ಕೃತಿಕ ಮತ್ತು ಶೈಕ್ಷಣಿಕ ಹಕ್ಕು:*

ಧಾರ್ಮಿಕ ಹಾಗೂ ಭಾಷಾ ಅಲ್ಪ ಸಂಖ್ಯಾತರ ರಕ್ಷಿಸುವುದು ಇದರ ಮುಖ್ಯ ಉದ್ದೇಶವಾಗಿದೆ. 29 ನೇ ವಿಧಿಯನ್ವಯ ಭಾರತದಲ್ಲಿ ವಾಸಿಸುವ ಪ್ರತಿಯೊಂದು ಜನಾಂಗದವರೂ ತಾವು ಹೊಂದಿರುವ ಭಾಷೆ, ಲಿಪಿ, ಸಂಸ್ಕೃತಿಗಳನ್ನು ರಕ್ಷಿಸುವ ಮತ್ತು ಬೆಳೆಸುವ ಅವಕಾಶ ಪಡೆದಿದ್ದಾರೆ.

30 ನೇ ವಿಧಿಯು ಧಾರ್ಮಿಕ ಮತ್ತು ಭಾಷೆ ಅಲ್ಪ ಸಂಖ್ಯಾತರು ತಮ್ಮದೇ ಆದ ಶೈಕ್ಷಣಿಕ ಸಂಸ್ಥೆಗಳನ್ನು ಸ್ಥಾಪಿಸುವ ಮತ್ತು ನಿರ್ವಹಿಸುವ ಹಕ್ಕನ್ನು ಹೊಂದಿದ್ದಾರೆ.

*6. ಸಂವಿಧಾನಾತ್ಮಕ ಪರಿಹಾರದ ಹಕ್ಕು:*

ಮೂಲಭೂತ ಹಕ್ಕುಗಳಿಗೆ ರಕ್ಷಣೆ ಇಲ್ಲದಿದ್ದರೆ ಅವುಗಳಿಗೆ ಯಾವ ಬೆಲೆಯೂ ಇಲ್ಲ ಆದುದರಿಂದ

ಡಾ. ಬಿ. ಆರ್ ಅಂಬೇಡ್ಕರ್ ರವರು 32 ನೇ ವಿಧಿಯು ಸಂವಿಧಾನದ "ಆತ್ಮ ಮತ್ತು ಹೃದಯ" ಎಂದು ಅಭಿಪ್ರಾಯ ಪಟ್ಟಿರುವುದು ಸದಾ ಸ್ಮರಣೀಯ. ಈ ವಿಧಿಯನ್ವಯ ಮೂಲಭೂತ ಹಕ್ಕುಗಳಿಗೆ ಧಕ್ಕೆ ಉಂಟಾದಾಗ ಯಾವುದೇ ವ್ಯಕ್ತಿ ಅವುಗಳ ರಕ್ಷಣೆಗಾಗಿ ನೇರವಾಗಿ ಸರ್ವೋಚ್ಚ ನ್ಯಾಯಾಲಯದ ಮೊರೆ ಹೋಗಬಹುದು. ಆದುದರಿಂದ ಸರ್ವೋಚ್ಚ ನ್ಯಾಯಾಲಯವನ್ನು "ಹಕ್ಕುಗಳ ರಕ್ಷಕ" ಎಂದು ಕರೆಯಲಾಗಿದೆ. 226 ನೇ ವಿಧಿಯನ್ವಯ ರಾಜ್ಯಗಳ ಉಚ್ಚನ್ಯಾಯಾಲಯಗಳು ಕೂಡಾ ಮೂಲಭೂತ ಹಕ್ಕುಗಳಿಗೆ ಸಂಬಂಧಿಸಿದಂತೆ ರಿಟ್ ಅರ್ಜಿಗಳನ್ನು ಸ್ವೀಕರಿಸಬಹುದು. ಸರ್ವೋಚ್ಚ ಹಾಗೂ ಉಚ್ಚ ನ್ಯಾಯಾಲಯಗಳೆರಡೂ ಮೂಲಭೂತ ಹಕ್ಕುಗಳಿಗೆ ಧಕ್ಕೆಯುಂಟಾದಾಗ 5 ರೀತಿಯ ಆಜ್ಞೆ (ರಿಟ್) ಗಳನ್ನು ಹೊರಡಿಸುವ ಅಧಿಕಾರವನ್ನು ಹೊಂದಿವೆ. ಅವುಗಳೆಂದರೆ ಹೇಬಿಯಸ್ ಕಾರ್ಪಸ್, ಮ್ಯಾಂಡಮಸ್, ಪ್ರೊಹಿಬಿಷನ್, ಸರ್ಷಿಯೊರರಿ ಮತ್ತು ಕೋವಾರಾಂಟೊ.

**1. "ಬಂಧಿಪ್ರತ್ಯಕ್ಷೀಕರಣ" (Habeas Corpus):** 'ಹೆಬಿಯಸ್ ಕಾರ್ಪಸ್' ಲ್ಯಾಟಿನ್ ಭಾಷೆಯ ಪದವಾಗಿದೆ. 'ದೇಹವನ್ನು ಹೊಂದು' ಎಂಬ ಅರ್ಥವನ್ನು ಕೊಡುತ್ತದೆ.

ಸರ್ವೋಚ್ಚ ನ್ಯಾಯಾಲಯ ಮತ್ತು ಉಚ್ಚನ್ಯಾಯಾಲಯಗಳು ಬಂಧಿತ ವ್ಯಕ್ತಿಯನ್ನು ತನ್ನ ಮುಂದೆ ಹಾಜರುಪಡಿಸುವಂತೆ ನೀಡುವ ಆಜ್ಞೆಯೇ 'ಬಂಧೀ ಪ್ರತ್ಯಕ್ಷೀಕರಣ' ಆಜ್ಞೆಯಾಗಿರುತ್ತದೆ. ಇದು ವ್ಯಕ್ತಿ ಸ್ವಾತಂತ್ರ್ಯವನ್ನು ರಕ್ಷಿಸುತ್ತದೆ. ಖಾಸಗಿಯಾಗಿ ಅಥವಾ ಸಾರ್ವಜನಿಕವಾಗಿ ಬಂಧಿಸಲ್ಪಟ್ಟ ವ್ಯಕ್ತಿಯನ್ನು ಬಿಡುಗಡೆಗೊಳಿಸಲು ಸಹಾಯಕವಾಗುತ್ತದೆ.

**2. ಪರಮಾದೇಶ (Mandamus):** ಮ್ಯಾಂಡಮಸ್ ಎಂಬುದು ಲಾಟಿನ್ ಪದವಾಗಿದೆ. 'ಆಜ್ಞೆಯನ್ನು' ಮಾಡು ಎಂಬ ಅರ್ಥವನ್ನು ನೀಡುತ್ತದೆ. ಶಾಸಕಾಂಗ, ಕಾರ್ಯಾಂಗ ಅಥವಾ ಅಧೀನ ಸಂಸ್ಥೆಗಳು ನಿರ್ವಹಿಸಬೇಕಾದ ಕಾರ್ಯಗಳನ್ನು ಮಾಡದಿದ್ದಾಗ, ಸಂಬಂಧಪಟ್ಟ ಕಾರ್ಯಗಳನ್ನು ನಿರ್ವಹಿಸುವಂತೆ ಉಚ್ಚನ್ಯಾಯಾಲಯ ಅಥವಾ

ಸರ್ವೋಚ್ಚನ್ಯಾಯಾಲಯ ನೀಡುವ ಆಜ್ಞೆಯೇ ಪರಮಾದೇಶವಾಗಿದೆ. ಈ ಆಜ್ಞೆಯನ್ನು ಖಾಸಗಿ ವ್ಯಕ್ತಿಗಳು, ರಾಜ್ಯಪಾಲರು, ಷ್ಟಪತಿಗಳ ವಿರುದ್ಧ ಹೊರಡಿಸಲು ಬರುವುದಿಲ್ಲ.

**3. ಪ್ರತಿಬಂಧಕಾಜ್ಞೆ (Prohibition):** ಪ್ರೊಹಿಬಿಷನ್ ಎಂಬ ಲಾಟಿನ್ ಪದವು "ಪ್ರತಿಬಂಧಿಸು" (Prohibition) ಎಂಬ ಅರ್ಥವನ್ನು ನೀಡುತ್ತದೆ. ಅಧೀನ ನ್ಯಾಯಾಲಯಗಳು ತಮ್ಮ ಅಧಿಕಾರ ವ್ಯಾಪ್ತಿಯನ್ನು ಮೀರಿ ತೀರ್ಪು ನೀಡಿದಾಗ, ಉನ್ನತ ನ್ಯಾಯಾಲಯ ಆ ತೀರ್ಪನ್ನು ತಕ್ಷಣ ಸ್ಥಗಿತಗೊಳಿಸುವಂತೆ ಅಧೀನ ನ್ಯಾಯಾಲಯಗಳಿಗೆ ನೀಡುವ ಆಜ್ಞೆಯೇ ಪ್ರತಿಬಂಧಕಾಜ್ಞೆಯಾಗಿರುತ್ತದೆ.

**4. ಉತ್ಪ್ರೇಕ್ಷಣಾ ಲೇಖ (Certiorary):** ಸರ್ಷಿಯೊರರಿ ಎಂಬ ಲಾಟಿನ್ ಪದವು "ದೃಡಪಡಿಸುವ" (Certify) ಎಂಬ ಅರ್ಥವನ್ನು ಹೊಂದಿದೆ. ಅಧೀನ ನ್ಯಾಯಾಲಯಗಳು ತಮ್ಮ ಅಧಿಕಾರ ವ್ಯಾಪ್ತಿಯನ್ನು ಮೀರಿ ತೀರ್ಪು ನೀಡಿದಾಗ, ಉನ್ನತ ನ್ಯಾಯಾಲಯ ತೀರ್ಪಿಗೆ ಸಂಬಂಧಪಟ್ಟ ದಾಖಲೆಗಳನ್ನು ತನಗೆ ಹಸ್ತಾಂತರಿಸುವಂತೆ ಆಜ್ಞೆ ನೀಡುವುದೇ ಉತ್ಪ್ರೇಕ್ಷಣಾ ಲೇಖವಾಗಿದೆ. ಈ ಆಜ್ಞೆಯನ್ನು ಉನ್ನತ ನ್ಯಾಯಾಲಯ ಅಧೀನ ನ್ಯಾಯಾಲಯಗಳ ವಿರುದ್ಧ ಮಾತ್ರ ಹೊರಡಿಸಬಹುದಾಗಿದೆ.

**5. ಅಧಿಕಾರ ಲೇಖ (Quo waranto):** 'ಕೋ ವಾರಂಟೋ' ಎಂಬ ಲಾಟಿನ್ ಪದವು 'ಯಾವ ಅಧಿಕಾರದ ಮೇಲೆ' (on what authority) ಎಂಬ ಅರ್ಥವನ್ನು ಹೊಂದಿದೆ. ಸರಿಯಾದ ವ್ಯಕ್ತಿ ಸರಿಯಾದ ಸಾರ್ವಜನಿಕ ಸ್ಥಾನವನ್ನು ಹೊಂದುವಂತೆ ಉನ್ನತ ನ್ಯಾಯಾಲಯ ನೀಡುವ ಆಜ್ಞೆಯೇ ಅಧಿಕಾರ ಲೇಖವಾಗಿರುತ್ತದೆ. ಅಕ್ರಮವಾಗಿ ಸಾರ್ವಜನಿಕ ಹುದ್ದೆಗಳನ್ನು ಅಥವಾ ಸರಕಾರದ ಉನ್ನತ ಸ್ಥಾನಗಳನ್ನು ಆಕ್ರಮಿಸಿದರೆ ಅಂಥವರ ವಿರುದ್ಧ ಈ ಆಜ್ಞೆಯನ್ನು ನ್ಯಾಯಾಲಯ ಹೊರಡಿಸಬಹುದಾಗಿದೆ.

## ಭಾರತೀಯ ಪೌರರ ಮೂಲಭೂತ ಕರ್ತವ್ಯಗಳು:

ಹಿಂದೆ ಅಸ್ತಿತ್ವದಲ್ಲಿದ್ದ ಸೋವಿಯತ್ ಒಕ್ಕೂಟದ ಸಂವಿಧಾನದಲ್ಲಿ ಮೂಲಭೂತ ಕರ್ತವ್ಯಗಳ ಪ್ರಸ್ತಾಪವಿತ್ತು. ಆ ಸಂವಿಧಾನದ ಪ್ರಭಾವದಿಂದಲೇ ಭಾರತೀಯ ಸಂವಿಧಾನದಲ್ಲಿ ಮೂಲಭೂತ ಕರ್ತವ್ಯಗಳನ್ನು ಅಳವಡಿಸಲಾಗಿದೆ. 1976 ರಲ್ಲಿ ಕೇಂದ್ರ ಸರ್ಕಾರ ನೇಮಿಸಿದ ಸರ್ದಾರ್ ಸ್ವರಣ್‌ಸಿಂಗ್ ಸಮಿತಿಯು ಮೂಲಭೂತ ಕರ್ತವ್ಯಗಳ ಬಗ್ಗೆ ಅಧ್ಯಯನ ಮಾಡಿ ತನ್ನ ವರದಿ ನೀಡಿತು. ಈ ಮೇರೆಗೆ 1976 ರಲ್ಲಿ ಕೇಂದ್ರ ಸರ್ಕಾರ ನೇಮಿಸಿದ ಸರ್ದಾರ್ ಸ್ವರಣ್ ಸಿಂಗ್ ಸಮಿತಿಯು ಮೂಲಭೂತ ಕರ್ತವ್ಯಗಳ ಬಗ್ಗೆ ಅಧ್ಯಯನ ಮಾಡಿ ತನ್ನ ವರದಿ ನೀಡಿತು. ಈ ಮೇರೆಗೆ 1976 ರಲ್ಲಿ ಸಂವಿಧಾನಕ್ಕೆ ತಂದ 42 ನೇ ತಿದ್ದುಪಡಿಯ ಮೂಲಕ 10 ಮೂಲಭೂತ ಕರ್ತವ್ಯಗಳನ್ನು ಸೇರಿಸಲಾಗಿದೆ. ಆದರೆ ಇವುಗಳು ನ್ಯಾಯ ನಿರ್ದೇಶಿತವಾಗಿರುವುದಿಲ್ಲ. ಇದಕ್ಕಾಗಿ ಸಂವಿಧಾನದಲ್ಲಿ 4 ಎ ಭಾಗವನ್ನೂ ವಿಧಿ 51 ಎ ಯನ್ನೂ ಸೇರಿಸಲಾಯಿತು. 2002 ರಲ್ಲಿ ಸಂವಿಧಾನಕ್ಕೆ ತಂದ 86 ನೇ ತಿದ್ದುಪಡಿ ಕಾಯಿದೆ ಮೇರೆಗೆ ಸೇರ್ಪಡೆಗೊಂಡ ವಿಧಿ 51 ಎ (ಕೆ) ಯು 6 ರಿಂದ 14 ವರ್ಷ ವಯೋಮಿತಿಯೊಳಗಿನ ಮಕ್ಕಳಿಗೆ ಉಚಿತ ಮತ್ತು ಕಡ್ಡಾಯ ಶಿಕ್ಷಣವನ್ನು ಪಡೆದುಕೊಳ್ಳಲು ಅವಕಾಶಗಳನ್ನು ನೀಡುವುದು. ಆಯಾ ತಂದೆ ತಾಯಿಗಳ ಅಥವಾ ಪೋಷಕರ ಮೂಲಭೂತ ಕರ್ತವ್ಯ ವಾಗಿರುತ್ತದೆ ಎಂದು ತಿಳಿಸುತ್ತದೆ. ಹಾಗಾಗಿ ಪ್ರಸ್ತುತ 11 ಮೂಲಭೂತ

ಕರ್ತವ್ಯಗಳಿವೆ. ಹಕ್ಕುಗಳು ಮತ್ತು ಕರ್ತವ್ಯಗಳು ಒಂದೇ ನಾಣ್ಯದ ಎರಡು ಮುಖಗಳಿದ್ದಂತೆ, ಭಾರತದ ಪ್ರಜೆಗಳಾದ ನಾವು ಸಂವಿಧಾನ ನೀಡಿರುವ ಮೂಲಭೂತ ಹಕ್ಕುಗಳನ್ನು ಅನುಭವಿಸಿದರಷ್ಟೇ ಸಾಲದು. ಪಡೆದ ಹಕ್ಕುಗಳಿಗೆ ಪ್ರತಿಯಾಗಿ ಕೆಲವು ಮೂಲಭೂತ ಕರ್ತವ್ಯಗಳನ್ನು ನಿರ್ವಹಿಸಬೇಕಾಗುತ್ತದೆ.

## ಮೂಲಭೂತ ಕರ್ತವ್ಯಗಳು:

1. ಸಂವಿಧಾನ, ರಾಷ್ಟ್ರಧ್ವಜ, ರಾಷ್ಟ್ರಗೀತೆಯನ್ನು ಗೌರವಿಸುವುದು.
2. ಸ್ವಾತಂತ್ರ್ಯ ಚಳುವಳಿಯ ಉದಾತ್ತ ಆದರ್ಶಗಳನ್ನು ಪಾಲಿಸುವುದು.
3. ಭಾರತದ ಸಾರ್ವಭೌಮತೆ, ಏಕತೆ ಮತ್ತು ಸಮಗ್ರತೆಯನ್ನು ಎತ್ತಿ ಹಿಡಿದು ಕಾಪಾಡುವುದು.
4. ಕರೆ ಬಂದಾಗ ದೇಶ ರಕ್ಷಣೆಗೆ ಮುಂದಾಗುವುದು.
5. ಸಾಮರಸ್ಯ ಮತ್ತು ಭ್ರಾತೃತ್ವ ಭಾವನೆ ಬೆಳೆಸಿಕೊಂಡು ಮಹಿಳೆಯರ ಗೌರವಕ್ಕೆ ಚ್ಯುತಿ ಉಂಟುಮಾಡುವ ಆಚರಣೆಗಳನ್ನು ತ್ಯಜಿಸುವುದು.
6. ನಮ್ಮ ವೈವಿಧ್ಯ ಸಂಸ್ಕೃತಿಯ ಶ್ರೀಮಂತ ಪರಂಪರೆಯನ್ನು ಗೌರವಿಸುವುದು.
7. ಅರಣ್ಯಗಳು, ಸರೋವರಗಳು. ನದಿಗಳು ಮತ್ತು ವನ್ಯಜೀವಿಗಳನ್ನು ಒಳಗೊಂಡ ನೈಸರ್ಗಿಕ ಪರಿಸರವನ್ನು ರಕ್ಷಿಸಿ ಅಭಿವೃದ್ಧಿ ಪಡಿಸುವುದು.
8. ವೈಜ್ಞಾನಿಕ ಮನೋಭಾವ ಮತ್ತು ಮಾನವೀಯ ಗುಣಗಳನ್ನು ಬೆಳೆಸಿಕೊಂಡು ವೈಚಾರಿಕ ಹಾಗೂ ಸುಧಾರಣಾ ಮನೋಭಾವನೆ ಬೆಳೆಸಿಕೊಳ್ಳುವುದು.
9. ಸಾರ್ವಜನಿಕ ಆಸ್ತಿ ರಕ್ಷಿಸುವುದು ಮತ್ತು ಎಲ್ಲಾ ರೀತಿಯ ಹಿಂಸೆಯನ್ನು ತ್ಯಜಿಸುವುದು.
10. ವೈಯಕ್ತಿಕ ಹಾಗೂ ಸಾಮೂಹಿಕ ಚಟುವಟಿಕೆಗಳಲ್ಲಿ ಪ್ರಾವೀಣ್ಯತೆಯನ್ನು ಪ್ರದರ್ಶಿಸಿ ದೇಶದ ಕೀರ್ತಿಯನ್ನು ಹೆಚ್ಚಿಸುವುದು.
11. ಎಲ್ಲಾ ತಂದೆ ತಾಯಿ ಅಥವಾ ಪಾಲಕರು 6 ರಿಂದ 14 ವರ್ಷ ವಯಸ್ಸಿನ ಮಕ್ಕಳಿಗೆ ಶಿಕ್ಷಣ ಪಡೆಯುವ ಅವಕಾಶ ಕಲ್ಪಿಸುವುದು.

## ಶಿಕ್ಷಣ ಹಕ್ಕು ಕಾಯ್ದೆ:

ಭಾರತದ ಸಂಸತ್ತು ವಿಧಿ 21 ಎ ಯನ್ನು ವ್ಯವಸ್ಥಿತವಾಗಿ ಅನುಷ್ಠಾನಗೊಳಿಸಲು 2009 ರಲ್ಲಿ ಶಿಕ್ಷಣ ಹಕ್ಕು ಕಾಯಿದೆಯನ್ನು ರಚಿಸಿತು. ಇದರನ್ವಯ 6 ರಿಂದ 14 ವರ್ಷ ವಯೋಮಿತಿ ಒಳಗಿನ ಎಲ್ಲಾ ಮಕ್ಕಳು ಕಡ್ಡಾಯವಾಗಿ ಶಿಕ್ಷಣವನ್ನು ಪಡೆದು ಕೊಳ್ಳಬೇಕು. 2011 ರಲ್ಲಿ ಕರ್ನಾಟಕ ಸರ್ಕಾರವು ಶಿಕ್ಷಣ ಹಕ್ಕು ಕಾಯ್ದೆಯನ್ನು ಅನುಷ್ಠಾನ ಗೊಳಿಸಿತು.

## ಮಾಹಿತಿ ಹಕ್ಕು ಕಾಯ್ದೆ:

ಭಾರತದ ಸಂಸತ್ತು ವಿಧಿ 19 (1) (ಎ) ಯ ಅನ್ವಯ 2005 ರಲ್ಲಿ ಮಾಹಿತಿಹಕ್ಕು ಕಾಯ್ದೆಯನ್ನು ರಚಿಸಿತು. ಇದು ಭ್ರಷ್ಟಾಚಾರವನ್ನು ನಿಯಂತ್ರಿಸುವಲ್ಲಿ ಮತ್ತು ಆಡಳಿತದಲ್ಲಿ ಪಾರದರ್ಶಕತೆಯನ್ನು ಹೆಚ್ಚಿಸುವಲ್ಲಿ ಪ್ರಮುಖ ಪಾತ್ರ ವಹಿಸುತ್ತದೆ. ಜೊತೆಗೆ ಸರ್ಕಾರಿ ಅಧಿಕಾರಗಳ ಹೊಣೆಗಾರಿಕೆಯನ್ನು ಹೆಚ್ಚಿಸುತ್ತದೆ. ಕಾನೂನಿನ ನ್ಯೂನತೆಗಳನ್ನು ಸರಿಪಡಿಸುವಲ್ಲಿ ಮಾಹಿತಿ ಹಕ್ಕು ಕಾಯ್ದೆ ಸಹಕಾರಿಯಾಗಿದೆ. ಈ ಮೂಲಕ ಪ್ರಜಾಪ್ರಭುತ್ವದ ದಕ್ಷತೆ, ಪಾರದರ್ಶಕತೆ ಮತ್ತು ಪ್ರಭುದ್ಧತೆಯನ್ನು ಹೆಚ್ಚಿಸಿ ಪ್ರಜಾಭಿವೃದ್ಧಿಗೆ ನೆರವಾಗಿದೆ.

## ಅಭ್ಯಾಸ

### I. ಒಂದು ವಾಕ್ಯದಲ್ಲಿ ಉತ್ತರಿಸಿ.

1. ಮೂಲಭೂತ ಹಕ್ಕನ್ನು ವ್ಯಾಖ್ಯಾನಿಸಿ.
2. ಮೂಲಭೂತ ಹಕ್ಕುಗಳ ಗೊತ್ತುವಳಿಯನ್ನು ಯಾವ ಅಧಿವೇಶನದಲ್ಲಿ ಮಂಡಿಸಲಾಗಿತ್ತು?
3. ಸಂವಿಧಾನದ ಮ್ಯಾಗ್ನಕಾರ್ಟ ಎಂದು ಯಾವುದನ್ನು ಕರೆಯಲಾಗಿದೆ?
4. ಸಂವಿಧಾನದ ಯಾವ ಭಾಗದಲ್ಲಿ ಮೂಲಭೂತ ಹಕ್ಕುಗಳ ವಿವರಣೆಯನ್ನು ನೀಡಲಾಗಿದೆ?
5. ಮೂಲಭೂತ ಹಕ್ಕುಗಳ ಅಧ್ಯಾಯದ ಬೆನ್ನೆಲುಬು ಎಂದು ಯಾವುದನ್ನು ಹೇಳುತ್ತೇವೆ?
6. ಯಾವ ತಿದ್ದುಪಡಿಯ ಮೂಲಕ ಆಸ್ತಿಯ ಹಕ್ಕನ್ನು ಮೂಲಭೂತ ಹಕ್ಕುಗಳ ಪಟ್ಟಿಯಿಂದ ತೆಗೆದು ಹಾಕಲಾಯಿತು?

### II. ಬಿಟ್ಟ ಸ್ಥಳದಲ್ಲಿ ಸರಿಯಾದ ಪದವನ್ನು ತುಂಬಿರಿ.

1. ಮೂಲಭೂತ ಹಕ್ಕುಗಳ ರಕ್ಷಕ ________.
2. ಸಂವಿಧಾನದ ________ ನೇ ವಿಧಿಯು ಜನಸ್ತೋಮದ ಜೀವಾಳವಾಗಿದೆ.
3. ಡಾ. ಬಿ. ಆರ್. ಅಂಬೇಡ್ಕರ್ ರವರ ಪ್ರಕಾರ ________ ಹಕ್ಕು ಸಂವಿಧಾನದ ಆತ್ಮ ಮತ್ತು ಹೃದಯವಿದ್ದಂತೆ.
4. ಹಕ್ಕು ಮತ್ತು ________ ಗಳು ಒಂದೇ ನಾಣ್ಯದ ಎರಡು ಮುಖಗಳಿದ್ದಂತೆ.
5. ಕರ್ನಾಟಕದಲ್ಲಿ ಶಿಕ್ಷಣ ಹಕ್ಕು ಕಾಯ್ದೆ________ ರಲ್ಲಿ ಅನುಷ್ಠಾನಗೊಂಡಿತು.

### III. ಎರಡು ಅಥವಾ ಮೂರು ವಾಕ್ಯಗಳಲ್ಲಿ ಉತ್ತರಿಸಿ.

1. ಮೂಲಭೂತ ಹಕ್ಕುಗಳು ಯಾವುವು?
2. ಮೂಲಭೂತ ಹಕ್ಕುಗಳ ಐತಿಹಾಸಿಕ ಹಿನ್ನೆಲೆ ತಿಳಿಸಿ.

3. ಸಮಾನತೆಯ ಹಕ್ಕು ಎಂದರೇನು?
4. ಶೋಷಣೆಯ ವಿರುದ್ಧದ ಹಕ್ಕಿನ ಮಹತ್ವ ತಿಳಿಸಿ.
5. ಧಾರ್ಮಿಕ ಸ್ವಾತಂತ್ರ್ಯ ಎಂದರೇನು?
6. ಸಂವಿಧಾನಾತ್ಮಕ ಪರಿಹಾರ ಹಕ್ಕು ಸಂವಿಧಾನದ "ಆತ್ಮ ಮತ್ತು ಹೃದಯ" ಹೇಗೆ?
7. ಐದು ಬಗೆಯ ರಿಟ್‌ಗಳನ್ನು ಹೆಸರಿಸಿ.
8. ಬಂಧಿ ಪ್ರತ್ಯಕ್ಷೀಕರಣ (ಹೇಬಿಯಸ್ ಕಾರ್ಪಸ್) ಎಂದರೇನು?

**IV. ನಾಲ್ಕು ಅಥವಾ ಐದು ವಾಕ್ಯಗಳಲ್ಲಿ ಉತ್ತರಿಸಿ.**

1. ಭಾರತೀಯ ಪ್ರಜೆಗೆ ಇರುವ ಸಾಂಸ್ಕೃತಿಕ ಮತ್ತು ಶೈಕ್ಷಣಿಕ ಹಕ್ಕುಗಳನ್ನು ತಿಳಿಸಿ.
2. ಸಂವಿಧಾನದ 19 ನೇ ವಿಧಿಯನ್ವಯ ಭಾರತೀಯರಿಗಿರುವ ಆರು ಸ್ವಾತಂತ್ರ್ಯಗಳಾವುವು?
3. ಮಕ್ಕಳ ಶಿಕ್ಷಣ ಹಕ್ಕು ಕಾಯ್ದೆಯ ಮುಖ್ಯಾಂಶಗಳಾವುವು?
4. ಮಾಹಿತಿ ಹಕ್ಕು ಕಾಯ್ದೆಯ ಮಹತ್ವ ತಿಳಿಸಿ.
5. ಮೂಲಭೂತ ಹಕ್ಕುಗಳ ನಾಲ್ಕು ಲಕ್ಷಣಗಳನ್ನು ತಿಳಿಸಿ.

**V. ಎಂಟು ಅಥವಾ ಹತ್ತು ವಾಕ್ಯಗಳಲ್ಲಿ ಉತ್ತರಿಸಿ.**

1. ಭಾರತೀಯ ಪೌರರ ಮೂಲಭೂತ ಹಕ್ಕುಗಳನ್ನು ವಿವರಿಸಿ.
2. ಮೂಲಭೂತ ಕರ್ತವ್ಯಗಳನ್ನು ಸಂವಿಧಾನದಲ್ಲಿ ಏಕೆ ಸೇರಿಸಲಾಯಿತು ಚರ್ಚಿಸಿ.

**ಸಲಹಾತ್ಮಕ ಚಟುವಟಿಕೆಗಳು:**

1. ಮೂಲಭೂತ ಹಕ್ಕುಗಳ ಉಲ್ಲಂಘನೆಯಾಗುವ ಸನ್ನಿವೇಶಗಳನ್ನು ಉದಾಹರಣೆಗಳೊಂದಿಗೆ ನಿರೂಪಿಸುವುದು.
2. 'ಮಾಹಿತಿ ಹಕ್ಕು' ಮತ್ತು 'ಶಿಕ್ಷಣದ ಹಕ್ಕು' ಕುರಿತು ಮಾಹಿತಿ ಸಂಗ್ರಹಿಸುವುದು.
3. ಅಂಗವಿಕಲರ ಹಕ್ಕುಗಳ ಬಗ್ಗೆ ಮಾಹಿತಿ ಸಂಗ್ರಹಿಸುವುದು.

# ಅಧ್ಯಾಯ- 4 ರಾಜ್ಯ ನೀತಿ ನಿರ್ದೇಶಕ ತತ್ವಗಳು (DIRECTIVE PRINCIPLES OF STATE POLICY)

## ಕಲಿಕೆಯ ಉದ್ದೇಶಗಳು:

1. ರಾಜ್ಯ ನೀತಿ ನಿರ್ದೇಶಕ ತತ್ವಗಳ ಅರ್ಥ ಮತ್ತು ಮಹತ್ವವನ್ನು ತಿಳಿಯುವುದು.
2. ರಾಜ್ಯ ನೀತಿ ನಿರ್ದೇಶಕ ತತ್ವಗಳ ಲಕ್ಷಣಗಳನ್ನು ಅರಿಯುವುದು.
3. ಸಮಾಜವಾದಿ, ಗಾಂಧಿವಾದಿ ಮತ್ತು ಉದಾರವಾದಿ ತತ್ವಗಳನ್ನು ಗುರುತಿಸುವುದು.
4. ಮೂಲಭೂತ ಹಕ್ಕುಗಳಿಗೂ, ರಾಜ್ಯ ನೀತಿ ನಿರ್ದೇಶಕ ತತ್ವಗಳಿಗೂ ಇರುವ ವ್ಯತ್ಯಾಸಗಳನ್ನು ಅರ್ಥೈಸಿಕೊಳ್ಳುವುದು.

"ರಾಜ್ಯ ನೀತಿ ನಿರ್ದೇಶಕ ತತ್ವಗಳು ಸಂವಿಧಾನದ ಅಂತರಾತ್ಮವಾಗಿವೆ" **ಗ್ರಾನ್‌ವಿಲ್ಲೇ ಆಸ್ಟಿನ್.**

"ಸಾಮಾಜಿಕ, ಆರ್ಥಿಕ ಮತ್ತು ರಾಜಕೀಯ ನ್ಯಾಯಗಳನ್ನು ದೇಶದ ಪ್ರಜೆಗಳಿಗೆ ದೊರಕಿಸಿ ಕೊಡುವ ಉದ್ದೇಶದಿಂದ ರಾಜ್ಯ ನೀತಿ ನಿರ್ದೇಶಕ ತತ್ವಗಳನ್ನು ಸಂವಿಧಾನದಲ್ಲಿ ಅಳವಡಿಸಲಾಗಿದೆಯಲ್ಲದೆ, ಅವುಗಳು ಮೂಲಭೂತ ಹಕ್ಕುಗಳಿಗಿಂತ ಮುಖ್ಯವಾದವುಗಳೆಂದು ಪರಿಗಣಿಸಲಾಗಿದೆ". **ಪ್ರೊ. ಕೆ. ಸಿ. ಮರ್ಕಾಂಡನ್**

## ಪೀಠಿಕೆ:

ನಮ್ಮ ಸಂವಿಧಾನದ ನಾಲ್ಕನೇ ಭಾಗದಲ್ಲಿ "ರಾಜ್ಯ ನೀತಿ ನಿರ್ದೇಶಕ ತತ್ವ" ಗಳನ್ನು ಅಳವಡಿಸಲಾಗಿದೆ. ಇವು ಐರ್ಲೆಂಡ್ ಸಂವಿಧಾನದಿಂದ ಎರವಲು ಪಡೆದ ಅಂಶಗಳಾಗಿವೆ. 36 ರಿಂದ 51 ರವರೆಗಿನ ವಿಧಿಗಳು ಈ ತತ್ವಗಳ ವಿವರಗಳನ್ನು ಒಳಗೊಂಡಿವೆ. ಸಾಮಾಜಿಕ ಮತ್ತು ಆರ್ಥಿಕ ನ್ಯಾಯ, ಸಮಾನತೆ ಹಾಗೂ ಅಭಿವೃದ್ಧಿ ಸಾಧಿಸಲು ಇವು ರಾಜ್ಯಕ್ಕೆ ನೀಡಿದ ನಿರ್ದೇಶನಗಳಾಗಿವೆ. ರಾಜ್ಯವು ತನ್ನ ನೀತಿಯನ್ನು ರೂಪಿಸುವಾಗ ಈ ತತ್ವಗಳನ್ನು ಬಳಸಿಕೊಳ್ಳಬೇಕು. ಈ ತತ್ವಗಳನ್ನು ಮೂಲಭೂತ ನಿಯಮಗಳೆಂದೇ ಪರಿಗಣಿಸಬೇಕೆಂಬುದು ನಮ್ಮ ಸಂವಿಧಾನದ ರಚನಾಕಾರರ ಬಯಕೆಯಾಗಿತ್ತು, ನ್ಯಾಯಾಲಯಗಳು ಕೂಡಾ ಇವುಗಳನ್ನು ಗಮನದಲಿಟ್ಟುಕೊಳ್ಳಬೇಕೆಂದು ತಿಳಿಸಲಾಗಿದೆ.

## ಪ್ರಾಮುಖ್ಯತೆ:

ರಾಜ್ಯ ನೀತಿ ನಿರ್ದೇಶಕ ತತ್ವಗಳ ಬಗ್ಗೆ ತಿಳಿಸುತ್ತಾ ನೆಹರೂರವರು "ಸಾಮಾಜಿಕ ಮತ್ತು ಆರ್ಥಿಕ ಕ್ರಾಂತಿಯಿಂದ ಉಂಟಾಗುವ ಸಾಧನೆಗಳ ಆಧಾರದ ಮೇಲೆ ಭಾರತದ ಉಳಿವು ನಿಂತಿದೆ, ಇಲ್ಲದಿದ್ದರೆ ನಮ್ಮ ಕಾಗದ ರಾಜ್ಯಾಂಗವು ಅಪ್ರಯೋಜಕ ಮತ್ತು ಗುರಿ ರಹಿತ ಸಂವಿಧಾನವಾಗಿರುತ್ತದೆ" ಎಂದು ನುಡಿದಿರುವರು. ದೇಶದಲ್ಲಿ ಸಮಾಜವಾದಿ ತತ್ವಗಳನು ಅನುಷ್ಠಾನಗೊಳಿಸುವುದರ ಜೊತೆಗೆ ಆರ್ಥಿಕ ಪ್ರಜಾಪ್ರಭುತ್ವವನ್ನು ಸ್ಥಾಪಿಸಲು ಈ ತತ್ವಗಳು

ಸಹಾಯಕವಾಗಿವೆ. ಈ ಕಾರಣದಿಂದ ಇವು ನಮ್ಮ ಸಂವಿಧಾನದಲ್ಲಿ ಶ್ರೇಷ್ಠ ಸ್ಥಾನವನ್ನು ಪಡೆದಿದೆ. ಅಲ್ಲದೆ ಇದನ್ನು ರಚನಾತ್ಮಕ ಭಾಗ (Constructive Part) ಎಂದು ವರ್ಣಿಸಲಾಗಿದೆ.

"ಮೂಲಭೂತ ಹಕ್ಕುಗಳ ಪಟ್ಟಿಯನ್ನು ಅಳವಡಿಸಿಕೊಳ್ಳುವಂತೆ ಸುಖೀ ರಾಜ್ಯದ ಲಿಖಿತ ಸಂವಿಧಾನಗಳು ರಾಜ್ಯ ನೀತಿ ನಿರ್ದೇಶಕ ತತ್ವಗಳನ್ನೂ ಅಳವಡಿಸಿಕೊಳ್ಳಬೇಕು" ಎಂದು ಗ್ರಾನ್ ವಿಲ್ಲೆ ಆಸ್ಟಿನ್ ರವರು ಪ್ರತಿಪಾದಿಸಿದ್ದಾರೆ. "ಒಂದು ವೇಳೆ ರಾಜ್ಯ ನೀತಿ ನಿರ್ದೇಶಕ ತತ್ವಗಳನ್ನು ಅಕ್ಷರಶಃ ಅನುಷ್ಠಾನಗೊಳಿಸಿದ್ದೇ ಆದರೆ ಭಾರತವು ಭೂಮಿಯ ಮೇಲಿನ ಸ್ವರ್ಗವಾಗುತ್ತದೆ" ಎಂದು ಹೇಳಿದ ಎಂ. ಸಿ. ಛಾಗ್ಲಾ ರವರ ಮಾತು ಸಂದರ್ಭೋಚಿತವಾಗಿದೆ. ಒಟ್ಟಿನಲ್ಲಿ ಪ್ರಸ್ತಾವನೆಯಲ್ಲಿ ಅಳವಡಿಸಿರುವ ಸಾಮಾಜಿಕ ಮತ್ತು ಅರ್ಥಿಕ ನ್ಯಾಯಗಳನ್ನು ಜಾರಿಗೆ ತರಲು ರಾಜ್ಯ ನೀತಿ ನಿರ್ದೇಶಕ ತತ್ವಗಳು ಪೂರಕವಾಗಿವೆ.

## ರಾಜ್ಯ ನೀತಿ ನಿರ್ದೇಶಕ ತತ್ವಗಳ ಲಕ್ಷಣಗಳು:

ರಾಜ್ಯ ನೀತಿ ನಿರ್ದೇಶಕ ತತ್ವಗಳು ಈ ಕೆಳಕಂಡ ಲಕ್ಷಣಗಳನ್ನು ಹೊಂದಿವೆ:

ರಾಜ್ಯ ನೀತಿ ನಿರ್ದೇಶಕ ತತ್ವಗಳು ರಾಜ್ಯವು ಆಡಳಿತದಲ್ಲಿ ಅಳವಡಿಸಿಕೊಳ್ಳಬೇಕಾದ ನಿರ್ದೇಶನಗಳಾಗಿವೆ. ಈ ತತ್ವಗಳು ಕಲ್ಯಾಣ ರಾಜ್ಯ ರಚನೆಯ ಉದ್ದೇಶಗಳ ಸಾರಸತ್ವವಾಗಿವೆ. ಇದರೊಂದಿಗೆ ಸ್ವಾತಂತ್ರ್ಯ, ಸಮಾನತೆ, ನ್ಯಾಯವನ್ನಾಧರಿಸಿದ ಸಮಾಜ ನಿರ್ಮಾಣಕ್ಕೆ ಇದು ದಾರಿ ದೀಪವಾಗಿದೆ. ರಾಜ್ಯ ನೀತಿ ನಿರ್ದೇಶಕ ತತ್ವಗಳನ್ನು ಪರಿಪಾಲಿಸದಿದ್ದರೆ ಜನರು ಸರ್ಕಾರದ ಮೇಲೆ ನ್ಯಾಯಾಲಯದಲ್ಲಿ ದಾವೆ ಹೂಡಲು ಬರುವುದಿಲ್ಲ. ಆದುದರಿಂದ ಇವು ನ್ಯಾಯಾರ್ಹವಾದವುಗಳಲ್ಲ.

## ರಾಜ್ಯ ನೀತಿ ನಿರ್ದೇಶಕ ತತ್ವಗಳು:

ರಾಜ್ಯ ನೀತಿ ನಿರ್ದೇಶಕ ತತ್ವಗಳನ್ನು ಅವುಗಳ ಸ್ವರೂಪದ ಆಧಾರ ಮೇಲೆ ಮೂರು ಮುಖ್ಯ ವಿಧಗಳಾಗಿ ವರ್ಗೀಕರಿಸಲಾಗಿದೆ. ಅವುಗಳೆಂದರೆ;

### *1. ಸಮಾಜವಾದಿ ತತ್ವಗಳು: (ವಿಧಿ 39, 41, 42, 43)*

ರಾಜ್ಯ ನೀತಿ ನಿರ್ದೇಶಕ ತತ್ವಗಳಲ್ಲಿಯು ಸಮಾಜವಾದಿ ಚಿಂತನೆಯನ್ನು ಆಧರಿಸಿದ ತತ್ವಗಳು ಇವೆ. ಇವು 32 ಜನರಿಗೆ ಸಾಮಾಜಿಕ ಮತ್ತು ಆರ್ಥಿಕ ನ್ಯಾಯವನ್ನು ದೊರಕಿಸಿ ಕೊಡುವ ನಿರ್ದೇಶನಗಳನ್ನು ನೀಡುತ್ತವೆ. ರಾಜ್ಯವು ಈ ತತ್ವಗಳನ್ನು ಪರಿಣಾಮಕಾರಿಯಾಗಿ ಕಾರ್ಯಗತಗೊಳಿಸಿದಲ್ಲಿ ಜನತೆಗೆ ಸಾಮಾಜಿಕ ನ್ಯಾಯ ದೊರಕುವುದರಲ್ಲಿ ಯಾವ ಸಂಶಯವೂ ಇರುವುದಿಲ್ಲ. ಈ ತತ್ವಗಳು ಯಾವುವೆಂದರೆ;

1. ಸ್ತ್ರೀ- ಪುರುಷರೆಲ್ಲರಿಗೂ ಸಮಾನ ಕೆಲಸಕ್ಕೆ ಸಮಾನ ವೇತನ.
2. ಸಂಪನ್ಮೂಲಗಳ ಸಮರ್ಪಕ ಹಂಚಿಕೆ.
3. ಸಂಪತ್ತಿನ ಕೇಂದ್ರೀಕರಣವಾಗುವುದನ್ನು ತಡೆಗಟ್ಟುವುದು.
4. ಮಕ್ಕಳು ಮತ್ತು ಕಾರ್ಮಿಕರ ಶೋಷಣೆಯನ್ನು ಹೋಗಲಾಡಿಸಿ ಆರೋಗ್ಯ ಕ್ರಮ ಕೈಗೊಳ್ಳುವುದು.

5. ವೃದ್ಧರು, ಮಕ್ಕಳು, ಮಹಿಳೆಯರು ಮತ್ತು ಅಶಕ್ತರಿಗೆ ಸಾಮರ್ಥ್ಯದ ಇತಿಮಿತಿಯೊಳಗೆ ಸಹಾಯ ಮಾಡುವುದು.

*2. ಗಾಂಧಿವಾದದ ತತ್ವಗಳು: (ವಿಧಿ 40, 43, 46, 47, 48)*

ಇವು ಗಾಂಧೀಜಿಯವರ ಪ್ರಭಾವದಿಂದ ಮೂಡಿಬಂದ ತತ್ವಗಳಾಗಿವೆ. ಅವುಗಳಲ್ಲಿ ಮುಖ್ಯವಾದವುಗಳು ಇಂತಿವೆ;

1. ಪಂಚಾಯತ್ ರಾಜ್ ವ್ಯವಸ್ಥೆಯನ್ನು ಸಂಘಟಿಸುವುದು.
2. ಪಾನ ನಿಷೇಧ ಜಾರಿಗೆ ತರುವುದು.
3. ಸಹಕಾರ ತತ್ವದ ಹಿನ್ನೆಲೆಯಲ್ಲಿ ಗ್ರಾಮೀಣ ಕೈಗಾರಿಕೆಗಳನ್ನು ಪ್ರೋತ್ಸಾಹಿಸುವುದು.
4. ಕೃಷಿ, ಪಶುಪಾಲನೆ ಮುಂತಾದವುಗಳನ್ನು ವೈಜ್ಞಾನಿಕವಾಗಿ ಅಭಿವೃದ್ಧಿಗೊಳಿಸುವುದು.
5. ಹಿಂದುಳಿದ ಹಾಗೂ ದುರ್ಬಲ ವರ್ಗಗಳ ಆರ್ಥಿಕ ಸುಧಾರಣೆಗೆ ಶ್ರಮಿಸುವುದು.
6. ಗೋಹತ್ಯೆಯನ್ನು ನಿಷೇಧಿಸುವುದು.

*3. ಉದಾರವಾದಿ ತತ್ವಗಳು: (ವಿಧಿ 44, 45, 50 ಮತ್ತು 51)*

ಬೇರೆ ಸಂವಿಧಾನದ ಉದಾರವಾದಿ ತತ್ವಗಳ ಪ್ರಭಾವಕ್ಕೆ ಒಳಪಟ್ಟು ಅಳವಡಿಸಿಕೊಂಡ ಅಂಶಗಳೇ ಉದಾರವಾದಿ ತತ್ವಗಳು. ಅವುಗಳಲ್ಲಿ ಮುಖ್ಯವಾದವುಗಳೆಂದರೆ;

1. ಏಕ ರೂಪ ನಾಗರೀಕ ಸಂಹಿತೆ ಜಾರಿ (uniform civil code).
2. ನ್ಯಾಯಾಂಗವನ್ನು ಕಾರ್ಯಾಂಗದಿಂದ ಬೇರ್ಪಡಿಸುವುದು.
3. ಮಕ್ಕಳಿಗೆ ಉಚಿತ ಕಡ್ಡಾಯ ಶಿಕ್ಷಣ ಕೊಡುವುದು.
4. ಅಂತರಾಷ್ಟ್ರೀಯ ಶಾಂತಿ ಸೌಹಾರ್ದತೆಯನ್ನು ಬೆಳೆಸುವುದು.
5. ಐತಿಹಾಸಿಕ ಸ್ಮಾರಕ ಮತ್ತು ವಸ್ತುಗಳ ಸಂರಕ್ಷಣೆ.

## ಮೂಲಭೂತ ಹಕ್ಕುಗಳಿಗೂ ಮತ್ತು ರಾಜ್ಯನೀತಿ ನಿರ್ದೇಶಕ ತತ್ವಗಳಿಗಿರುವ ವ್ಯತ್ಯಾಸಗಳು.

ಸಂವಿಧಾನದ 3 ನೇ ಭಾಗದಲ್ಲಿ ನಮೂದಿಸಲ್ಪಟ್ಟಿರುವ ಮೂಲಭೂತ ಹಕ್ಕುಗಳಿಗೂ ನಾಲ್ಕನೇ ಭಾಗದಲ್ಲಿರುವ ರಾಜ್ಯ ನೀತಿ ನಿರ್ದೇಶಕ ತತ್ವಗಳ ನಡುವೆ ಕೆಲವು ವ್ಯತ್ಯಾಸಗಳಿವೆ. ಕೆಳಕಂಡ ಅಂಶಗಳು ಇದನ್ನು ಸ್ಪಷ್ಟಪಡಿಸುತ್ತವೆ.

1. ಮೂಲಭೂತ ಹಕ್ಕುಗಳ ಉಲ್ಲಂಘನೆಯಾದಾಗ ನ್ಯಾಯಾಲಯಕ್ಕೆ ಹೋಗಿ ರಕ್ಷಣೆ ಪಡೆಯಬಹುದು. ಆದರೆ ರಾಜ್ಯನೀತಿ ನಿರ್ದೇಶಕ ತತ್ವಗಳನ್ನು ಕಾರ್ಯಗತಗೊಳಿಸದೇ ಇದ್ದಾಗ ರಾಜ್ಯದ ವಿರುದ್ಧ ನ್ಯಾಯಾಲಯಕ್ಕೆ ಹೋಗಲು ಅವಕಾಶವಿರುವುದಿಲ್ಲ.

2. ಪ್ರಜಾಪ್ರಭುತ್ವ ವಿರೋಧಿ ಕೆಲಸಗಳನ್ನು ಮಾಡದಂತೆ ಮೂಲಭೂತ ಹಕ್ಕುಗಳು ರಾಜ್ಯವನ್ನು ತಡೆದರೆ, ರಾಜ್ಯ ನಿರ್ದೇಶಕ ತತ್ವಗಳು ಆರ್ಥಿಕ ಅಭಿವೃದ್ಧಿ ಮತ್ತು ಸಾಮಾಜಿಕ ಪ್ರಗತಿಗಾಗಿ ಕೆಲವು ಕರ್ತವ್ಯಗಳನ್ನು ಮಾಡಲೇಬೇಕೆಂದು ರಾಜ್ಯಕ್ಕೆ ಸೂಚನೆ ನೀಡುತ್ತವೆ.
3. ಮೂಲಭೂತ ಹಕ್ಕುಗಳು ವ್ಯಕ್ತಿಗಳಿಗೆ ಸಂಬಂಧಿಸಿದರೆ, ರಾಜ್ಯ ನೀತಿ ನಿರ್ದೇಶಕ ತತ್ವಗಳು ಇಡೀ ಸಮಾಜಕ್ಕೆ ಸಂಬಂಧಿಸಿವೆ.
4. ಮೂಲಭೂತ ಹಕ್ಕುಗಳು ರಾಜಕೀಯ ಪ್ರಜಾಪ್ರಭುತ್ವಕ್ಕೆ ಬುನಾದಿಯಾಗಿದ್ದರೆ, ರಾಜ್ಯನೀತಿ ನಿರ್ದೇಶಕ ತತ್ವಗಳು ಸಾಮಾಜಿಕ ಮತ್ತು ಆರ್ಥಿಕ ಪ್ರಜಾಪ್ರಭುತ್ವದ ಸ್ಥಾಪನೆಗೆ ಸಹಾಯಕವಾಗಿವೆ.

## ವ್ಯತ್ಯಾಸಗಳ ಪಟ್ಟಿ

| **ರಾಜ್ಯನೀತಿ ನಿರ್ದೇಶಕ ತತ್ವಗಳು** | **ಮೂಲಭೂತ ಹಕ್ಕುಗಳು** |
|---|---|
| 1. ಸಕಾರಾತ್ಮಕವಾದವುಗಳು | a. ನಕಾರಾತ್ಮಕವಾದವುಗಳು |
| 2. ನ್ಯಾಯ ನಿರ್ದೇಶಿತವಾಗಿರುವುದಿಲ್ಲ | b. ನ್ಯಾಯಾರ್ಹವಾಗಿದೆ |
| 3. ಸಮಾಜ ಕೇಂದ್ರಿತವಾಗಿವೆ | c. ವ್ಯಕ್ತಿ ಕೇಂದ್ರಿತವಾಗಿವೆ |
| 4. ಸಾಮಾಜಿಕ ಮತ್ತು ಆರ್ಥಿಕ ಪ್ರಜಾಪ್ರಭುತ್ವದ ಸಂವರ್ಧನೆಗೆ ಪೂರಕ | d. ರಾಜಕೀಯ ಪ್ರಜಾಪ್ರಭುತ್ವದ ಅಭಿವೃದ್ಧಿಗೆ ಪೂರಕ |
| 5. ಸರ್ಕಾರದ ನಿರ್ದೇಶಕ ಗುರಿಗಳಾಗಿವೆ | e. ನಿರ್ದೇಶಿತ ಗುರಿಗಳ ಸಾಧನಗಳಾಗಿವೆ. |

## ರಾಜ್ಯನೀತಿ ನಿರ್ದೇಶಕ ತತ್ವಗಳ ಕಾರ್ಯಾಚರಣೆ:

ಕೇಂದ್ರ ಹಾಗೂ ರಾಜ್ಯ ಸರ್ಕಾರಗಳು ಸಾಮಾಜಿಕ ಮತ್ತು ಆರ್ಥಿಕ ಪ್ರಗತಿಯನ್ನು ಸಾಧಿಸುವ ಸಲುವಾಗಿ ರಾಜ್ಯ ನೀತಿ ನಿರ್ದೇಶಕ ತತ್ವಗಳ ಆಧಾರದಲ್ಲಿ ಹಲವು ಕಾರ್ಯಕ್ರಮಗಳನ್ನು ಜಾರಿಗೆ ತಂದಿವೆ. ಅವುಗಳೆಂದರೆ

1. ಭೂ ಸುಧಾರಣೆಯ ಜಾರಿ
2. ಪಂಚಾಯತ್ ರಾಜ್ ಸ್ಥಾಪನೆ
3. ಸಮಾನ ಕೆಲಸಕ್ಕೆ ಸಮಾನ ವೇತನ.
4. ಉಚಿತ ಮತ್ತು ಕಡ್ಡಾಯ ಶಿಕ್ಷಣ ಜಾರಿ.

ಒಟ್ಟಿನಲ್ಲಿ ರಾಜ್ಯ ನೀತಿ ನಿರ್ದೇಶಕ ತತ್ವಗಳು ಸುಖೀರಾಜ್ಯದ ಸ್ಥಾಪನೆಗೆ ಪೂರಕವಾದ ತತ್ವಗಳಾಗಿವೆ. ವಿವಿಧ ಯೋಜನೆಗಳು ಮತ್ತು ನೀತಿಗಳ ಅನುಷ್ಠಾನದಿಂದ ಸಾಕಾರಗೊಳ್ಳುತ್ತಿವೆ. ಪ್ರಜೆಗಳ ಸಮಾಜಿಕ, ಆರ್ಥಿಕ ಬೆಳವಣಿಗೆಗೂ ದಾರಿದೀಪವಾಗುತ್ತಿವೆ. ರಾಜ್ಯ ನೀತಿ ನಿರ್ದೇಶಕ ತತ್ವಗಳು ರಾಜಕೀಯ ಪಕ್ಷಗಳ ಪ್ರಣಾಳಿಕೆಗಳಲ್ಲಿ ಭರವಸೆಗಳ ರೂಪದಲ್ಲಿ ಪ್ರತಿಫಲನಗೊಳ್ಳುತ್ತಿವೆ. ಒಂದು ವೇಳೆ ರಾಜಕೀಯ ಇಚ್ಛಾಶಕ್ತಿಯಿಂದ ಎಲ್ಲ ರಾಜ್ಯ

ನೀತಿ ನಿರ್ದೇಶಕ ತತ್ವಗಳನ್ನು ಅಕ್ಷರಶಃ ಅನುಷ್ಠಾನಗೊಳಿಸಿದರೆ, ಸ್ವಸ್ಥ, ಸುಭದ್ರ, ಸಮೃದ್ಧ, ಭ್ರಷ್ಟರಹಿತ ಬೃಹತ್ ಭಾರತವನ್ನು ನಿರ್ಮಾಣ ಮಾಡಲು ಸಾಧ್ಯ.

## ಅಭ್ಯಾಸ

I. **ಒಂದು ವಾಕ್ಯಗಳಲ್ಲಿ ಉತ್ತರಿಸಿ.**

1. ರಾಜ್ಯ ನೀತಿ ನಿರ್ದೇಶಕ ತತ್ವಗಳನ್ನು ಸಂವಿಧಾನದ ಎಷ್ಟನೇ ಭಾಗದಲ್ಲಿ ಅಳವಡಿಸಲಾಗಿದೆ?
2. ರಾಜ್ಯ ನೀತಿ ನಿರ್ದೇಶಕ ತತ್ವಗಳನ್ನು ಯಾವ ದೇಶದ ಸಂವಿಧಾನದಿಂದ ಎರವಲು ಪಡೆಯಲಾಗಿದೆ?
3. ರಾಜ್ಯ ನೀತಿ ನಿರ್ದೇಶಕ ತತ್ವಗಳನ್ನು ಯಾವ ವಿಧಿಗಳ ಅಡಿಯಲ್ಲಿ ವಿವರಿಸಲಾಗಿದೆ.
4. ಉದಾರವಾದಿ ತತ್ವಗಳೆಂದರೇನು?
5. ಸಮಾಜವಾದಿ ತತ್ವಗಳ ಮೂಲ ಉದ್ದೇಶವೇನು?
6. ಗಾಂಧಿವಾದಿ ತತ್ವಗಳೆಂದರೇನು?

II. **ಎರಡು ಅಥವಾ ಮೂರು ವಾಕ್ಯಗಳಲ್ಲಿ ಉತ್ತರಿಸಿ.**

1. ರಾಜ್ಯ ನೀತಿ ನಿರ್ದೇಶಕ ತತ್ವಗಳ ಮುಖ್ಯ ಲಕ್ಷಣಗಳಾವುವು?
2. ರಾಜ್ಯ ನೀತಿ ನಿರ್ದೇಶಕ ತತ್ವಗಳ ವಿಧಗಳಾವುವು?
3. ಎರಡು ಉದಾರವಾದಿ ತತ್ವಗಳನ್ನು ತಿಳಿಸಿ.
4. ರಾಜ್ಯ ನೀತಿ ನಿರ್ದೇಶಕ ತತ್ವದ ಆಧಾರದ ಮೇಲೆ ರೂಪಿತವಾದ ಎರಡು ಕಾನೂನುಗಳನ್ನು ತಿಳಿಸಿ.

III. **ನಾಲ್ಕು ಅಥವಾ ಐದು ವಾಕ್ಯಗಳಲ್ಲಿ ಉತ್ತರಿಸಿ.**

1. ಸಮಾಜವಾದಿ ತತ್ವಗಳನ್ನು ತಿಳಿಸಿ.
2. ಗಾಂಧಿವಾದಿ ತತ್ವಗಳು ಯಾವುವು?
3. ರಾಜ್ಯ ನೀತಿ ನಿರ್ದೇಶಕ ತತ್ವಗಳ ಪ್ರಾಮುಖ್ಯತೆಯನ್ನು ತಿಳಿಸಿ.
4. ರಾಜ್ಯ ನೀತಿ ನಿರ್ದೇಶಕ ತತ್ವಗಳಿಗೂ, ಮೂಲ ಭೂತ ಹಕ್ಕುಗಳಿಗೂ ಇರುವ ವ್ಯತ್ಯಾಸಗಳನ್ನು ಪಟ್ಟಿಮಾಡಿರಿ.

IV. **ಎಂಟು ಅಥವಾ ಹತ್ತು ವಾಕ್ಯಗಳಲ್ಲಿ ಉತ್ತರಿಸಿ.**

1. ಸರ್ಕಾರಗಳು ರಾಜ್ಯ ನೀತಿ ನಿರ್ದೇಶಕ ತತ್ವಗಳನ್ನು ಸರಿಯಾಗಿ ಅನುಷ್ಠಾನಗೊಳಿಸಿವೆಯೇ? ಉದಾಹರಣೆಗಳೊಂದಿಗೆ ವಿವರಿಸಿ.
2. ರಾಜ್ಯ ನೀತಿ ನಿರ್ದೇಶಕ ತತ್ವಗಳ ಪ್ರಮುಖ ಲಕ್ಷಣಗಳನ್ನು ವಿವರಿಸಿ.
3. "ರಾಜಕೀಯ ಇಚ್ಛಾಶಕ್ತಿಯಿಂದ ರಾಜ್ಯ ನೀತಿ ನಿರ್ದೇಶಕ ತತ್ವಗಳೆಲ್ಲವನ್ನು ಅನುಷ್ಠಾನಗೊಳಿಸಿದ್ದೇ ಆದರೆ ಸ್ವಸ್ಥ ಸಮೃದ್ಧ ಭಾರತದ ನಿರ್ಮಾಣ ಸಾಧ್ಯ"- ಈ ಮಾತನ್ನು ಸಮರ್ಥಿಸಿ.

V. **ಖಾಲಿ ಬಿಟ್ಟ ಸ್ಥಳದಲ್ಲಿ ಸರಿಯಾದ ಪದವನ್ನು ತುಂಬಿರಿ.**

1. ಪಾನ ನಿಷೇಧ ಜಾರಿ ಇದು ________ ತತ್ವವಾಗಿದೆ.
2. ಸಮಾನ ಕೆಲಸಕ್ಕೆ ಸಮಾನ ವೇತನ ಇದು ________ ತತ್ವವಾಗಿದೆ.
3. ರಾಜ್ಯ ನೀತಿ ನಿರ್ದೇಶಕ ತತ್ವಗಳು ರಾಜ್ಯಕ್ಕೆ ನೀಡಿದ ________ ಗಳಾಗಿವೆ.
4. ರಾಜ್ಯ ನೀತಿ ನಿರ್ದೇಶಕ ತತ್ವಗಳು ________ ಮತ್ತು ________ ಪ್ರಜಾಪ್ರಭುತ್ವದ ಸ್ಥಾಪನೆಗೆ ಬುನಾದಿಯಾಗಿದೆ.

**ಸಲಹಾತ್ಮಕ ಚಟುವಟಿಕೆಗಳು:**

1. ಮೂಲಭೂತ ಹಕ್ಕುಗಳು ಮತ್ತು ರಾಜ್ಯನೀತಿ ನಿರ್ದೇಶಕ ತತ್ವಗಳ ನಡುವಿನ ವ್ಯಾತ್ಯಾಸಗಳನ್ನು ಗುರುತಿಸಿ.
2. ರಾಜ್ಯ ನೀತಿ ನಿರ್ದೇಶಕ ತತ್ವಗಳನ್ನು ಪಟ್ಟಿ ಮಾಡಿ.

# ಅಧ್ಯಾಯ- 5 ಕೇಂದ್ರ ಕಾರ್ಯಾಂಗ (UNION EXECUTIVES)

## ಕಲಿಕೆಯ ಉದ್ದೇಶಗಳು:

1. ಸಂಸದೀಯ ಸರ್ಕಾರ ಪದ್ಧತಿಯ ಬಗ್ಗೆ ಅರಿವು ಮೂಡಿಸುವುದು.
2. ರಾಷ್ಟ್ರಪತಿಯ ಚುನಾವಣೆ, ಅಧಿಕಾರ ಮತ್ತು ಸ್ಥಾನಮಾನದ ಬಗ್ಗೆ ತಿಳುವಳಿಕೆ ಮೂಡಿಸುವುದು.
3. ಪ್ರಧಾನಮಂತ್ರಿಯ ಆಯ್ಕೆ, ಅಧಿಕಾರ ಮತ್ತು ಕಾರ್ಯದ ಬಗ್ಗೆ ಅರಿವು ಮೂಡಿಸುವುದು.
4. ಕೇಂದ್ರ ಮಂತ್ರಿಮಂಡಲದ ರಚನೆ, ಅಧಿಕಾರ ಮತ್ತು ಕಾರ್ಯಗಳ ಬಗ್ಗೆ ತಿಳುವಳಿಕೆ ಮೂಡಿಸುವುದು.

"ಪ್ರಾಜ್ಞರು ಅಧಿಕಾರಗಳನ್ನು ಪಡೆಯುವವರೆಗೂ ಅಥವಾ ಅಧಿಕಾರ ಪಡೆದವರು ಪ್ರಾಜ್ಞರಾಗುವವರೆಗೂ ಮನುಕುಲದ ಕಷ್ಟಗಳಿಗೆ ಕೊನೆಯೇ ಇಲ್ಲ" **ಪ್ಲೇಟೋ.**

## ಪೀಠಿಕೆ:

ರಾಜ್ಯದ ನಾಲ್ಕು ಮೂಲಾಂಶಗಳಲ್ಲಿ ಸರ್ಕಾರವು ಒಂದಾಗಿದೆ. ಸರ್ಕಾರವನ್ನು ಕೇಂದ್ರ ಸರ್ಕಾರ, ರಾಜ್ಯ ಸರ್ಕಾರ, ಸ್ಥಳೀಯ ಸರ್ಕಾರ ಎಂದು ವರ್ಗೀಕರಿಸಲಾಗಿದೆ. ಇದರಲ್ಲಿ ರಾಷ್ಟ್ರಮಟ್ಟದಲ್ಲಿ ಕೇಂದ್ರ ಸರ್ಕಾರವು ಪ್ರಮುಖವಾಗಿದೆ.

ಭಾರತ ಸಂವಿಧಾನದ ಐದನೇ ಭಾಗದ 52 ರಿಂದ 151 ರವರೆಗಿನ ವಿಧಿಗಳು ಕೇಂದ್ರ ಸರ್ಕಾರದ ಕುರಿತು ವಿವರಣೆ ನೀಡುತ್ತವೆ. ಇದು ರಾಷ್ಟ್ರಪತಿ, ಉಪರಾಷ್ಟ್ರಪತಿ, ಕೇಂದ್ರ ಸಚಿವ ಸಂಪುಟ, ರಾಜ್ಯಸಭೆ, ಲೋಕಸಭೆ, ಸರ್ವೋಚ್ಚ ನ್ಯಾಯಾಲಯ, ಅಟಾರ್ನಿ ಜನರಲ್ ಮತ್ತು ಮಹಾಲೆಕ್ಕ ಪರಿಶೋಧಕರನ್ನು ಒಳಗೊಂಡಿರುತ್ತದೆ.

## ರಾಷ್ಟ್ರಪತಿ:

ಭಾರತದ ಗಣತಂತ್ರ ವ್ಯವಸ್ಥೆಯಲ್ಲಿ ರಾಷ್ಟ್ರಪತಿ ಸ್ಥಾನವು ಅತ್ಯುನ್ನತವಾದುದು. ಸಂವಿಧಾನದ ವಿಧಿ 52 ಭಾರತಕ್ಕೆ ಒಬ್ಬ ರಾಷ್ಟ್ರಾಧ್ಯಕ್ಷರಿರತಕ್ಕದ್ದು. ಇವರು ದೇಶದ ಪ್ರಥಮ ಪ್ರಜೆ. ಕೇಂದ್ರ ಕಾರ್ಯಾಂಗದ ಎಲ್ಲ ಕಾರ್ಯಗಳು ಇವರ ಹೆಸರಿನಲ್ಲಿ ನಡೆಯುತ್ತವೆ. ದೇಶದ ಮೂರು ರಕ್ಷಣಾ ಪಡೆಗಳ ಮಹಾದಂಡನಾಯಕರಾಗಿರುತ್ತಾರೆ. ಭಾರತದಲ್ಲಿ ಸಂಸದೀಯ ಪ್ರಜಾಪ್ರಭುತ್ವ ವ್ಯವಸ್ಥೆಯನ್ನು ಅಳವಡಿಸಿಕೊಂಡಿರುವುದರಿಂದ ರಾಷ್ಟ್ರಾಧ್ಯಕ್ಷರು ರಾಷ್ಟ್ರದ ನಾಮಮಾತ್ರ ಮುಖ್ಯಸ್ಥರಾಗಿರುತ್ತಾರೆ.

### *ರಾಷ್ಟ್ರಪತಿ ಚುನಾವಣೆ:*

ರಾಷ್ಟ್ರಾಪತಿಯವರ ಚುನಾವಣಾ ವಿಧಾನವನ್ನು ಐರ್ಲೇಂಡ್ ಸಂವಿಧಾನದಿಂದ ಎರವಲು ಪಡೆದುಕೊಳ್ಳಲಾಗಿದೆ. ರಾಷ್ಟ್ರಾಧ್ಯಕ್ಷರು ಪರೋಕ್ಷ ಚುನಾವಣಾ ವಿಧಾನದ ಮೂಲಕ ಚುನಾಯಿತರಾಗುತ್ತಾರೆ. ಇವರು ಎಲ್ಲಾ ವಿಧಾನಸಭೆಗಳ ಚುನಾಯಿತ ಸದಸ್ಯರು ಮತ್ತು ಲೋಕಸಭೆ ಮತ್ತು ರಾಜ್ಯಸಭೆಯ ಚುನಾಯಿತ ಸದಸ್ಯರನ್ನೊಳಗೊಂಡ ನಿರ್ವಚನಾ ಮಂಡಳಿಯಿಂದ ಚುನಾಯಿತರಾಗುತ್ತಾರೆ, ನಿರ್ವಚನಾ ಮಂಡಳಿಯನ್ನು ಆಂಗ್ಲ ಭಾಷೆಯಲ್ಲಿ Electoral College ಎಂದು ಕರೆಯುತ್ತಾರೆ, ವಿಧಾನಸಭಾ ಸದಸ್ಯರ ಮತ್ತು ಸಂಸತ್ ಸದಸ್ಯರ ಮತಗಳ ಮೌಲ್ಯಗಳನ್ನು ನಿರ್ಧರಿಸಲಾಗುತ್ತದೆ. ರಾಜ್ಯಗಳ ವಿಧಾನಸಭಾ ಸದಸ್ಯರ ಮತದ ಮೌಲ್ಯವು ಒಂದು ರಾಜ್ಯದಿಂದ ಇನ್ನೊಂದು ರಾಜ್ಯಕ್ಕೆ ವ್ಯತ್ಯಾಸವಾಗುತ್ತದೆ.

### *ಅರ್ಹತೆಗಳು:*

1. ಭಾರತದ ಪ್ರಜೆಯಾಗಿರಬೇಕು.
2. ಕನಿಷ್ಠ 35 ವರ್ಷ ವಯೋಮಿತಿವುಳ್ಳವರಾಗಿರಬೇಕು.
3. ಲೋಕಸಭಾ ಸದಸ್ಯರಾಗಲು ಇರಬೇಕಾದ ಅರ್ಹತೆಗಳನ್ನು ಹೊಂದಿರಬೇಕು.
4. ಸರ್ಕಾರಿ ಸೇವೆ ಮತ್ತು ಯಾವುದೇ ಲಾಭದಾಯಕ ಹುದ್ದೆಗಳಲ್ಲಿ ಇರಬಾರದು.
5. ಮಾನಸಿಕವಾಗಿ ಅಸ್ವಸ್ಥರಾಗಿರಬಾರದು.
6. ಆರ್ಥಿಕವಾಗಿ ದಿವಾಳಿಯಾಗಿದ್ದಾರೆಂದು ನ್ಯಾಯಾಂಗದಿಂದ ಘೋಷಿಸಲ್ಪಟ್ಟಿರಬಾರದು.

### *ರಾಷ್ಟ್ರಪತಿಯ ಅಧಿಕಾರವಧಿ:*

ರಾಷ್ಟ್ರಪತಿಗಳ ಅಧಿಕಾರವಧಿ ಐದು ವರ್ಷಗಳು. ಅವಧಿಗೂ ಮುನ್ನವೆ ಉಪರಾಷ್ಟ್ರಪತಿಗಳಿಗೆ ರಾಜೀನಾಮೆ ನೀಡಬಹುದು. ಈ ಸಂದರ್ಭದಲ್ಲಿ ಉಪರಾಷ್ಟ್ರಪತಿಗಳು ಹಂಗಾಮಿ ರಾಷ್ಟ್ರಪತಿಯಾಗಿ ಕಾರ್ಯನಿರ್ವಹಿಸುತ್ತಾರೆ.

### *ಪ್ರಮಾಣ ವಚನ:*

ರಾಷ್ಟ್ರಪತಿ ಚುನಾಯಿತರಾದ ಮೇಲೆ ಸರ್ವೋಚ್ಛ ನ್ಯಾಯಾಲಯದ ಮುಖ್ಯ ನ್ಯಾಯಾಧೀಶರಿಂದ ಅಥವಾ ಅವರ ಅನುಪಸ್ಥಿತಿಯಲ್ಲಿ ಸರ್ವೋಚ್ಛ ನ್ಯಾಯಾಲಯದ ಹಿರಿಯ ನ್ಯಾಯಾಧೀಶರೊಬ್ಬರಿಂದ ಪ್ರಮಾಣವಚನ ಸ್ವೀಕರಿಸುತ್ತಾರೆ.

### *ವೇತನ ಮತ್ತು ಸೌಲತ್ತುಗಳು:*

ರಾಷ್ಟ್ರಪತಿಗಳು ನವದೆಹಲಿಯಲ್ಲಿರುವ ರಾಷ್ಟ್ರಪತಿ ಭವನದಲ್ಲಿ ವಾಸ ಮಾಡುತ್ತಾರೆ. ಇದು 1950 ರವರೆಗೆ ಭಾರತದ ವೈಸ್‌ರಾಯರ ನಿವಾಸವಾಗಿತ್ತು. ಇದನು ಇಂಗ್ಲೆಂಡಿನ ಎಡ್ವಿನ್ ಲೂಟಿಯನ್ ರವರ ವಾಸ್ತುಶಿಲ್ಪದ ಪ್ರಕಾರ ನಿರ್ಮಿಸಲಾಗಿದೆ. ಇದರಲ್ಲಿ 340 ಕೊಠಡಿಗಳಿವೆ. ರಾಷ್ಟ್ರಪತಿಗಳು ಕಾಲಕಾಲಕ್ಕೆ ಸಂಸತ್ತಿನಿಂದ ಪರಿಷ್ಕೃತವಾದ ವೇತನವನ್ನು ಪಡೆಯುತ್ತಾರೆ. ಪ್ರಾರಂಭದಲ್ಲಿ ಹತ್ತು ಸಾವಿರ ವೇತನವನ್ನು ನಿಗದಿ ಮಾಡಲಾಗಿತ್ತು. ಪ್ರಸ್ತುತ 1 ಲಕ್ಷದ 50

ಸಾವಿರ ರೂ ವೇತನವನ್ನು ಕೇಂದ್ರ ಸಂಚಿತ ನಿಧಿಯಿಂದ ನೀಡಲಾಗುತ್ತದೆ. ಹಾಗೂ ನಿವೃತ್ತಿ ನಂತರ ವಾರ್ಷಿಕ ಮೂರು ಲಕ್ಷ ರೂಗಳ ಪಿಂಚಣಿ ಪಡೆಯುತ್ತಾರೆ.

*ರಾಷ್ಟ್ರಪತಿಯವರ ಮಹಾಭಿಯೋಗ:*

ದೋಷಾರೋಪಣೆಯ ಹಿನ್ನೆಲೆಯಲ್ಲಿ ರಾಷ್ಟ್ರಪತಿಗಳನ್ನು ಅಧಿಕಾರ ಅವಧಿಗಿಂತ ಮುಂಚಿತವಾಗಿ ಹುದ್ದೆಯಿಂದ ತೆಗೆದು ಹಾಕುವುದೇ ಮಹಾಭಿಯೋಗವಾಗಿರುತ್ತದೆ. ಈ ಮಹಾಭಿಯೋಗದ ವಿಧಿವಿಧಾನಗಳನ್ನು ಅಮೇರಿಕಾ ಸಂಯುಕ್ತ ಸಂಸ್ಥಾನದಿಂದ ಎರವಲು ಪಡೆದುಕೊಳ್ಳಲಾಗಿದೆ. ಇದಕ್ಕಾಗಿ ಲೋಕಸಭೆ ಅಥವಾ ರಾಜ್ಯಸಭೆಯಲ್ಲಿ ಸಂವಿಧಾನ ಉಲ್ಲಂಘನೆಯ ದೋಷಾರೋಪಣೆಗೆ ಸಂಬಂಧಿಸಿದ ಪ್ರಸ್ತಾವನೆ ಮಂಡಿಸಬೇಕು. ಪ್ರಸ್ತಾವನೆಗೆ ಸಂಬಂಧಪಟ್ಟ ಸದನದ ಒಟ್ಟು ಸದಸ್ಯರ 1/ 4 ರಷ್ಟು ಸದಸ್ಯರ ಸಹಿ ಮಾಡಿ ಬೆಂಬಲಿಸಬೇಕು. ಮಹಾಭಿಯೋಗ ಪ್ರಕ್ರಿಯೆಗೆ 14 ದಿನ ಮುಂಚಿತವಾಗಿ ರಾಷ್ಟ್ರಾಧ್ಯಕ್ಷರಿಗೆ ನೋಟಿಸ್‌ನ್ನು ಕಳುಹಿಸಬೇಕು. ಮಹಾಭಿಯೋಗ ಗೊತ್ತುವಳಿಯು ಎರಡು ಸದನಗಳಲ್ಲಿ ಬಹುಮತದಿಂದ ಸ್ವೀಕೃತಗೊಳ್ಳಬೇಕು. ಅಂದರೆ ಎರಡು ಸದನಗಳ ಒಟ್ಟು ಸದಸ್ಯರ ಬಹುಮತ ಮತ್ತು ಹಾಜರಿರುವ ಸದಸ್ಯರ 2/ 3 ರಷ್ಟು ಸದಸ್ಯರ ಬಹುಮತವಾಗಿರುತ್ತದೆ.

## ಅಧಿಕಾರ ಮತ್ತು ಕಾರ್ಯಗಳು:

ನಮ್ಮ ರಾಷ್ಟ್ರಪತಿ ಕೇಂದ್ರ ಕಾರ್ಯಾಂಗದ ನಾಮಮಾತ್ರ ಮುಖ್ಯಸ್ಥರಾಗಿರುವುದನ್ನು ಈಗಾಗಲೇ ತಿಳಿದಿದ್ದೇವೆ. ಅವರ ಅಧಿಕಾರ ಮತ್ತು ಕಾರ್ಯಗಳನ್ನು ತಿಳಿಯುವುದು ಅವಶ್ಯಕವಾಗಿದೆ.

*1. ಶಾಸನೀಯ ಅಧಿಕಾರಗಳು:*

ಎ) ಸಂಸತ್ತಿನ ಅಧಿವೇಶನವನ್ನು ಕರೆಯುವ, ಮುಂದೂಡುವ ಮತ್ತು ಲೋಕಸಭೆಯನ್ನು ವಿಸರ್ಜಿಸುವ ಅಧಿಕಾರವನ್ನು ಹೊಂದಿದ್ದಾರೆ.

ಬಿ) ಸಾರ್ವತ್ರಿಕ ಚುನಾವಣೆಯ ನಂತರ ನೂತನ ಸಂಸತ್ತನ್ನು ಉದ್ದೇಶಿಸಿ ಭಾಷಣ ಮಾಡುವ ಹಾಗೂ ಪ್ರತಿವರ್ಷ ಮೊದಲ ಅಧಿವೇಶನವನ್ನು ಉದ್ದೇಶಿಸಿ ಭಾಷಣ ಮಾಡುವ ಅವಕಾಶ ಇವರಿಗಿರುತ್ತದೆ.

ಸಿ) ಲೋಕಸಭೆಯಲ್ಲಿ ಹಣಕಾಸಿನ ಮಸೂದೆಯನ್ನು ಮಂಡಿಸಲು ಪೂರ್ವಾನುಮತಿ ನೀಡುತಾರೆ.

ಡಿ) ಸಂಸತ್ತಿನಲ್ಲಿ ಅಂಗೀಕಾರವಾದ ಎಲ್ಲಾ ಮಸೂದೆಗಳು ಕಾನೂನು ಸ್ವರೂಪ ಪಡೆಯಬೇಕಾದರೆ ರಾಷ್ಟ್ರಪತಿಗಳ ಅನುಮೋದನೆ ಅಗತ್ಯ.

ಇ) ಸಂಸತ್ತು ಅಧಿವೇಶನದಲ್ಲಿ ಇಲ್ಲದಿರುವಾಗ ಅಗತ್ಯವೆನಿಸಿದರೆ ರಾಷ್ಟ್ರಪತಿಗಳು ಸುಗ್ರೀವಾಜ್ಞೆಗಳನ್ನು ಹೊರಡಿಸುತ್ತಾರೆ.

ಎಫ್) ರಾಷ್ಟ್ರಪತಿಗಳು ರಾಜ್ಯಸಭೆಗೆ ಕಲೆ, ವಿಜ್ಞಾನ, ಸಾಹಿತ್ಯ, ಸಮಾಜಸೇವಾ ಕ್ಷೇತ್ರಗಳಲ್ಲಿ ಪರಿಣಿತಿ, ಅನುಭವ, ಜ್ಞಾನ ಪಡೆದಂತಹ 12 ಜನ ಸದಸ್ಯರನ್ನು ನಾಮಕರಣ ಮಾಡುತ್ತಾರೆ.

*2. ಕಾರ್ಯಾಂಗೀಯ ಅಧಿಕಾರಗಳು:*

ಭಾರತ ಸರ್ಕಾರದ ಕಾರ್ಯಾಂಗದ ಸಮಸ್ತ ಕಾರ್ಯಗಳೆಲ್ಲವೂ ರಾಷ್ಟ್ರಪತಿಯ ಹೆಸರಿನಲ್ಲಿಯೇ ನಡೆಯುತ್ತವೆ.

ಎ) ಭಾರತದ ರಾಷ್ಟ್ರಪತಿಗಳು ಪ್ರಧಾನಮಂತ್ರಿಗಳನ್ನು ನೇಮಕ ಮಾಡುತ್ತಾರೆ ಮತ್ತು ಅವರ ಸಲಹೆಯ ಮೇರೆಗೆ ಮಂತ್ರಿಮಂಡಲದ ಸದಸ್ಯರನ್ನು ನೇಮಕ ಮಾಡುತ್ತಾರೆ.
ಬಿ) ರಾಜ್ಯದ ರಾಜ್ಯಪಾಲರು, ಅಟಾರ್ನಿ ಜನರಲ್, ಮಹಾಲೆಕ್ಕ ಪರಿಶೋಧಕರನ್ನು ನೇಮಕ ಮಾಡುತ್ತಾರೆ.
ಸಿ) ಮುಖ್ಯ ಚುನಾವಣಾ ಆಯುಕ್ತರು ಮತ್ತು ಚುನಾವಣಾ ಆಯುಕ್ತರುಗಳನ್ನು ಕೇಂದ್ರ ಲೋಕಸೇವಾ ಆಯೋಗದ ಅಧ್ಯಕ್ಷರು ಮತ್ತು ಇತರ ಸದಸ್ಯರುಗಳನ್ನು ನೇಮಕ ಮಾಡುತ್ತಾರೆ.
ಡಿ) ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ಪಂಗಡಗಳ ಕಲ್ಯಾಣ ಆಯೋಗದ ಅಧ್ಯಕ್ಷರು ಮತ್ತು ಸದಸ್ಯರನ್ನು ನೇಮಕ ಮಾಡುತ್ತಾರೆ.

### *3. ಹಣಕಾಸಿನ ಕಾರ್ಯಗಳು:*

ರಾಷ್ಟ್ರಪತಿಗಳ ಹಣಕಾಸಿನ ಅಧಿಕಾರಗಳು ಇಂತಿವೆ;

ಎ) ರಾಷ್ಟ್ರಪತಿಗಳ ಪೂರ್ವಾನುಮತಿಯೊಡನೆ ಹಣಕಾಸಿನ ಮಸೂದೆಗಳನ್ನು ಲೋಕಸಭೆಯಲ್ಲಿ
ಮಂಡಿಸಲಾಗುತ್ತದೆ.
ಬಿ) ವಾರ್ಷಿಕ ಮುಂಗಡ ಪತ್ರವನ್ನು ಸಂಸತ್ತಿನಲ್ಲಿ (ಲೋಕಸಭೆಯಲ್ಲಿ) ಮಂಡಿಸುವಂತೆ ನೋಡಿಕೊಳ್ಳುತ್ತಾರೆ.
ಸಿ) ಹಣಕಾಸು ಆಯೋಗವನ್ನು ನೇಮಕ ಮಾಡುತ್ತಾರೆ.
ಡಿ) ಭಾರತ ಸಾಧಿಲ್ಲಾರು ನಿಧಿಯಿಂದ ತುರ್ತು ವೆಚ್ಚಕ್ಕಾಗಿ ಹಣ ಬಿಡುಗಡೆ ಮಾಡಲು ಅನುಮತಿ ನೀಡುತ್ತಾರೆ.

### *4. ನ್ಯಾಯಾಂಗಿಯ ಅಧಿಕಾರಗಳು:*

ಎ) ಸರ್ವೋಚ್ಚ ನ್ಯಾಯಲಯದ ಮುಖ್ಯನ್ಯಾಯಾಧೀಶರನ್ನು ಮತ್ತು ಇತರ ನ್ಯಾಯಧೀಶರುಗಳನ್ನು ನೇಮಕ ಮಾಡುವುದು.
ಬಿ) ರಾಜ್ಯ ಉಚ್ಚನ್ಯಾಯಾಲಯಗಳ ಮುಖ್ಯ ನ್ಯಾಯಾಧೀಶರನ್ನು ಮತ್ತು ಇತರ ನ್ಯಾಯಧೀಶರುಗಳನ್ನು ನೇಮಕ ಮಾಡುವುದು.
ಸಿ) ಸಾರ್ವಜನಿಕ ಮಹತ್ವದ ವಿಷಯದಲ್ಲಿ ಕಾನೂನು ಪ್ರಶ್ನೆ ಉದ್ಭವಿಸಿದರೆ ಸರ್ವೋಚ್ಚ ನ್ಯಾಯಾಲಯದ ಸಲಹೆ ಪಡೆಯುವುದು.

### ರಾಷ್ಟ್ರಾಧ್ಯಕ್ಷರ ಕ್ಷಮಾಧಾನದ ಅಧಿಕಾರ ಒಳಗೊಂಡ ಅಂಶಗಳು ಗಮನಾರ್ಹ:

ಎ) ಶಿಕ್ಷೆಯ ಪ್ರಮಾಣವನ್ನು ಕಡಿಮೆಗೊಳಿಸುವುದು.
ಬಿ) ಶಿಕ್ಷೆಯನ್ನು ಮತ್ತೊಂದು ಶಿಕ್ಷೆಗೆ ವರ್ಗಾಯಿಸುವುದು.
ಸಿ) ಶಿಕ್ಷೆಯನ್ನು ತಾತ್ಕಾಲಿಕವಾಗಿ ತಡೆಹಿಡಿಯುವುದು.
ಡಿ) ಶಿಕ್ಷೆಯನ್ನು ಪೂರ್ಣವಾಗಿ ಕ್ಷಮಾಧಾನ ಮಾಡುವುದು.

### *5. ಮಿಲಿಟರಿ ಅಧಿಕಾರಗಳು:*

ಎ) ಭಾರತದ ರಕ್ಷಣಾ ಪಡೆಗಳ ಮಹಾದಂಡನಾಯಕರಾಗಿ ರಾಷ್ಟ್ರಪತಿಗಳು ಕಾರ್ಯನಿರ್ವಹಿಸುತಾರೆ.
ಬಿ) ಭೂಸೇನೆ, ನೌಕಾಸೇನೆ ಮತ್ತು ವಾಯುಸೇನೆಗಳ ದಂಡನಾಯಕರುಗಳನ್ನು ನೇಮಕ ಮಾಡುತ್ತಾರೆ.

ಸಿ) ಯುದ್ಧ ಘೋಷಿಸುವ, ಶಾಂತಿ ಒಪ್ಪಂದ ಮಾಡಿಕೊಳ್ಳುವ ಅಧಿಕಾರ ಹೊಂದಿರುತ್ತಾರೆ.

### *6. ತುರ್ತು ಪರಿಸ್ಥಿತಿಯ ಅಧಿಕಾರಗಳು:*

ಭಾರತದ ರಾಷ್ಟ್ರಪತಿಗಳು ಮೂರು ಬಗೆಯ ತುರ್ತುಪರಿಸ್ಥಿತಿಗಳನ್ನು ಘೋಷಿಸುವ ಅಧಿಕಾರವಿದೆ.

**ಎ) ರಾಷ್ಟ್ರೀಯ ತುರ್ತು ಪರಿಸ್ಥಿತಿ:** 352 ನೇ ವಿಧಿಯ ಪ್ರಕಾರ ದೇಶದ ಮೇಲೆ ಬಾಹ್ಯ ಆಕ್ರಮಣವಾದಾಗ ಮತ್ತು ದೇಶದೊಳಗೆ ಶಸ್ತ್ರಾಸ್ತ್ರ ದಂಗೆ ಉಂಟಾದಾಗ ರಾಷ್ಟ್ರೀಯ ತುರ್ತುಪರಿಸ್ಥಿತಿ ಘೋಷಿಸುವ ಅಧಿಕಾರ ಹೊಂದಿರುತ್ತಾರೆ.

**ಬಿ) ರಾಜ್ಯ ತುರ್ತು ಪರಿಸ್ಥಿತಿ:** 356 ನೇ ವಿಧಿಯ ಪ್ರಕಾರ ರಾಜ್ಯಗಳಲ್ಲಿ ಸರ್ಕಾರವು ಸಂವಿಧಾನಾತ್ಮಕವಾಗಿ ಕಾರ್ಯನಿರ್ವಹಿಸಲು ವಿಫಲವಾದಾಗ

**ಸಿ) ಆರ್ಥಿಕ ತುರ್ತು ಪರಿಸ್ಥಿತಿ**: 360 ನೇ ವಿಧಿಯ ಪ್ರಕಾರ ದೇಶದಲ್ಲಿ ಹಣಕಾಸಿನ ತೀವ್ರ ಬಿಕ್ಕಟ್ಟು ಉಂಟಾದಾಗ

### *ಇತರೆ ಅಧಿಕಾರಗಳು:*

ಈ ಮೇಲಿನ ಅಧಿಕಾರಗಳಲ್ಲದೆ ಇತರೆ ಕಾರ್ಯಗಳು ಇವೆ.

1. ರಾಷ್ಟ್ರಪತಿ ಅಂತರಾಷ್ಟ್ರೀಯ ಮಟ್ಟದಲ್ಲಿ ರಾಷ್ಟ್ರವನ್ನು ಪ್ರತಿನಿಧಿಸುತ್ತಾರೆ.
2. ವಿದೇಶಗಳಿಗೆ ರಾಯಭಾರಿಗಳನ್ನು ನೇಮಕ ಮಾಡುತ್ತಾರೆ.
3. ಕೇಂದ್ರಾಡಳಿತ ಪ್ರದೇಶದ ಆಡಳಿತ ನಿರ್ವಹಣೆ ಮಾಡುತ್ತಾರೆ.
4. ಅಂತರಾಷ್ಟ್ರೀಯ ಒಪ್ಪಂದಗಳು ರಾಷ್ಟ್ರಪತಿಯ ಸಮ್ಮುಖದಲ್ಲಿ ನಡೆಯುತ್ತವೆ.

## ರಾಷ್ಟ್ರಾಧ್ಯಕ್ಷರ ಸಂವಿಧಾನಾತ್ಮಕ ಸ್ಥಾನಮಾನ:

ಭಾರತದ ರಾಷ್ಟ್ರಪತಿಯ ಹುದ್ದೆಯು ಮೇಲ್ನೋಟಕ್ಕೆ ಉತ್ಸವಮೂರ್ತಿಯಂತೆ ಕಂಡರೂ, ರಾಷ್ಟ್ರಪತಿಯು ತಮ್ಮದೇಯಾದ ಅಧಿಕಾರಗಳನ್ನು ಹೊಂದಿರುತ್ತಾರೆ. ಇವರು ದೇಶದ ಸರ್ವೋಚ್ಚ ಅಧಿಕಾರವನ್ನು ಹೊಂದಿದ್ದು, ಕೇಂದ್ರ ಕಾರ್ಯಾಂಗದ ಎಲ್ಲ ಕಾರ್ಯಗಳೂ ಇವರ ಹೆಸರಿನಲ್ಲಿಯೇ ನಡೆಯುತ್ತವೆ. ಈ ಎಲ್ಲಾ ಅಧಿಕಾರಗಳನ್ನು ಪ್ರಧಾನಮಂತ್ರಿ ನೇತೃತ್ವದ ಮಂತ್ರಿಮಂಡಲದ ಸಲಹೆ ಮೇರೆಗೆ ನಿರ್ವಹಿಸುತ್ತಾರೆ. ಭಾರತದ ರಾಷ್ಟ್ರಾಧ್ಯಕ್ಷರ ಹುದ್ದೆಯು ಬ್ರಿಟನ್ನಿನ ರಾಣಿಯ ಸ್ಥಾನಮಾನ ಹೋಲುತ್ತದೆ. ಆದ್ದರಿಂದ

1. ಕೆ. ಎಂ. ಮುನ್ಷಿಯವರು ರಾಷ್ಟ್ರಪತಿ ಕೇವಲ ನಾಮಮಾತ್ರ ಕಾರ್ಯಾಂಗಾಧಿಕಾರಿಯಾಗಿರುತ್ತಾರೆ ಎಂದು ಅಭಿಪ್ರಾಯ ಪಟ್ಟಿದ್ದಾರೆ.
2. ರಾಷ್ಟ್ರಪತಿ ಅಧಿಕಾರಗಳು ಮತ್ತು ಕರ್ತವ್ಯಗಳು ಹೆಚ್ಚು ಕಡಿಮೆ ಬ್ರಿಟಿಷ್ ರಾಣಿಯ ಅಧಿಕಾರ ಹಾಗೂ ಕರ್ತವ್ಯಗಳಂತಿವೆ ಎಂದು ಎಂ. ವಿ. ಪೈಲಿಯವರು ಅಭಿಪ್ರಾಯ ಪಟ್ಟಿದ್ದಾರೆ.

3. ಡಾ. ಬಿ. ಆರ್. ಅಂಬೇಡ್ಕರ್ ರವರ ಪ್ರಕಾರ "ರಾಷ್ಟ್ರಪತಿ ಕೇವಲ ಸಂವಿಧಾನದ ಮುಖ್ಯಸ್ಥರೇ ಹೊರತು ವಾಸ್ತವ ಕಾರ್ಯಾಂಗದ ಅಧಿಕಾರಿಯಲ್ಲ. ಅವರು ರಾಷ್ಟ್ರದ ಮುಖ್ಯಸ್ಥರೇ ಹೊರತು ಸರ್ಕಾರದ ಮುಖ್ಯಸ್ಥರಲ್ಲ" ಎಂದಿದ್ದಾರೆ.

ರಾಷ್ಟ್ರಪತಿ ಹುದ್ದೆಯನ್ನು ಅಲಂಕರಿಸುವವರ ವೈಯಕ್ತಿಕ ವರ್ಚಸ್ಸು, ಕಾರ್ಯವೈಖರಿ ಅವರ ಸ್ಥಾನಮಾನವನ್ನು ನಿರ್ಧರಿಸುತ್ತದೆ. ಒಟ್ಟಿನಲ್ಲಿ ಹೇಳುವುದಾದರೆ ರಾಷ್ಟ್ರಪತಿಗಳಾದವರಲ್ಲಿ ಅನೇಕರು ಕೇವಲ ಉತ್ಸವಮೂರ್ತಿಗಳಾಗಿರದೇ ಕ್ರಿಯಾಶೀಲರಾಗಿ ಜನಮನದಲ್ಲಿ ಅಚ್ಚಳಿಯದೆ ಉಳಿದಿದ್ದಾರೆ.

## ರಾಷ್ಟ್ರಪತಿಗಳ ಪಟ್ಟಿ:

| ಕ್ರಮ ಸಂಖ್ಯೆ | ಹೆಸರು | ಆಡಳಿತಾವಧಿ |
|---|---|---|
| 1. | ಡಾ. ರಾಜೇಂದ್ರ ಪ್ರಸಾದ್ | ಮೇ 12, 1952 ರಿಂದ ಮೇ 12, 1962 |
| 2. | ಡಾ. ಎಸ್ ರಾಧಾಕೃಷ್ಣನ್ | ಮೇ 13, 1962 ರಿಂದ ಮೇ 12, 1967 |
| 3. | ಜಾಕೀರ್ ಹುಸೇನ್ | ಮೇ 13, 1967 ರಿಂದ ಮೇ 03, 1969 |
| 4. | ವಿ. ವಿ ಗಿರಿ | ಆಗಸ್ಟ್ 24, 1969 ರಿಂದ ಆಗಸ್ಟ್ 23, 1974 |
| 5. | ಫಕ್ರುದಿನ್ ಆಲಿ ಮಹಮ್ಮದ್ | ಆಗಸ್ಟ್ 24, 1974 ರಿಂದ ಫೆಬ್ರವರಿ 11, 1977 |
| 6. | ಎನ್ ಸಂಜೀವರೆಡ್ಡಿ | ಜುಲೈ 25, 1977 ರಿಂದ ಜುಲೈ 24, 1982 |
| 7. | ಗ್ಯಾನಿ ಜೇಲ್ ಸಿಂಗ್ | ಜುಲೈ 25, 1982 ರಿಂದ ಜುಲೈ 24, 1987 |
| 8. | ಆರ್ ವೆಂಕಟರಾಮನ್ | ಜುಲೈ 25, 1987 ರಿಂದ ಜುಲೈ 24, 1992 |
| 9. | ಶಂಕರ್ ದಯಾಳ್ ಶರ್ಮ | ಜುಲೈ 25, 1992 ರಿಂದ ಜುಲೈ 24, 1997 |
| 10. | ಕೆ. ಆರ್ ನಾರಾಯಣ್ | ಜುಲೈ 25, 1997 ರಿಂದ ಜುಲೈ 24, 2002 |
| 11. | ಎ. ಪಿ. ಜೆ. ಅಬ್ದುಲ್ ಕಲಾಂ | ಜುಲೈ 25, 2002 ರಿಂದ ಜುಲೈ 24, 2007 |
| 12. | ಪ್ರತಿಭಾ ಸಿಂಗ್ ಪಾಟೀಲ್ | ಜುಲೈ 25, 2007 ರಿಂದ 25 ಜುಲೈ 2012 |
| 13. | ಪ್ರಣವ್ ಮುಖರ್ಜಿ | 25 ಜುಲೈ 2012 ರಿಂದ |

### *ಎ) ಉಪರಾಷ್ಟ್ರಪತಿ:*

ಭಾರತದ ಗಣರಾಜ್ಯ ವ್ಯವಸ್ಥೆಯಲ್ಲಿ ಉಪರಾಷ್ಟ್ರಪತಿ ಸ್ಥಾನವು 2 ನೇಯ ಉನ್ನತ ಸ್ಥಾನವಾಗಿರುತ್ತದೆ. ಇದು ಅಮೇರಿಕಾ ಸಂಯುಕ್ತ ಸಂಸ್ಥಾನದ ಉಪಾಧ್ಯಕ್ಷರ ಸ್ಥಾನವನ್ನು ಹೋಲುತ್ತದೆ. ಸಂವಿಧಾನದ ವಿಧಿ- 63 ಭಾರತಕ್ಕೆ ಒಬ್ಬ ಉಪರಾಷ್ಟ್ರಾಧ್ಯಕ್ಷರಿರತಕ್ಕದ್ದು ಎಂದು ತಿಳಿಸುತ್ತದೆ.

### *ಬಿ) ಅರ್ಹತೆಗಳು:*

1. ಭಾರತದ ಪ್ರಜೆಯಾಗಿರಬೇಕು.
2. ಕನಿಷ್ಠ 35 ವರ್ಷ ವಯೋಮಿತಿಯುಳ್ಳವರಾಗಿರಬೇಕು.
3. ರಾಜ್ಯಸಭಾ ಸದಸ್ಯರಾಗಲು ಇರಬೇಕಾದ ಅರ್ಹತೆಗಳೆಲ್ಲವೂ ಇರಬೇಕು.

4. ಯಾವುದೇ ಲಾಭದಾಯಕ ಹುದ್ದೆಯನ್ನು ಹೊಂದಿರಬಾರದು.

*ಸಿ) ಚುನಾವಣೆ:*

ಉಪರಾಷ್ಟ್ರಪತಿಯು ಸಂಸತ್ತಿನ ಎರಡು ಸದನಗಳ ಎಲ್ಲ ಸದಸ್ಯರನ್ನೊಳಗೊಂಡ ನಿರ್ವಚನಾ ಮಂಡಳಿ (Electoral college) ಯಿಂದ ಚುನಾಯಿತರಾಗುತ್ತಾರೆ. ಸಂಸತ್ತಿನ ಲೋಕಸಭೆ ಮತ್ತು ರಾಜ್ಯಸಭೆಗಳ ನಾಮಕರಣಗೊಂಡ ಸದಸ್ಯರೂ ಉಪರಾಷ್ಟ್ರಾಧ್ಯಕ್ಷರ ಚುನಾವಣೆಯಲ್ಲಿ ಭಾಗವಹಿಸುತ್ತಾರೆ. ಆದರೆ ರಾಷ್ಟ್ರಾಧ್ಯಕ್ಷರ ಚುನಾವಣೆಯಲ್ಲಿ ಇವರು ಭಾಗವಹಿಸುವುದಿಲ್ಲ.

*ಡಿ) ಪ್ರಮಾಣ ವಚನ:*

ಉಪರಾಷ್ಟ್ರಪತಿ ರಾಷ್ಟ್ರಾಧ್ಯಕ್ಷರಿಂದ ಅಥವಾ ಅವರ ಅನುಪಸ್ಥಿತಿಯಲ್ಲಿ ಅವರಿಂದ ನೇಮಕಗೊಂಡ ವ್ಯಕ್ತಿಯಿಂದ ಪ್ರಮಾಣ ವಚನವನ್ನು ಸ್ವೀಕರಿಸುತ್ತಾರೆ.

*ಇ) ಅಧಿಕಾರಾವಧಿ:*

ಇವರ ಅಧಿಕಾರವಧಿ 5 ವರ್ಷ. ಅವಧಿಗೆ ಮೊದಲೇ ಇವರು ತಮ್ಮ ರಾಜೀನಾಮೆಯನ್ನು ರಾಷ್ಟ್ರಪತಿಗಳಿಗೆ ಸಲ್ಲಿಸಬಹುದು. ಸಂಸತ್ತು ಉಪರಾಷ್ಟ್ರಪತಿಯನ್ನು ಪದಚ್ಯುತಗೊಳಿಸುವ ಅಧಿಕಾರವನ್ನು ಹೊಂದಿರುತ್ತದೆ. ಪದಚ್ಯುತಗೊಳಿಸುವ ಗೊತ್ತುವಳಿಯನ್ನು ಮೊದಲು ರಾಜ್ಯಸಭೆಯಲ್ಲಿಯೇ ಮಂಡಿಸಬೇಕು. ರಾಜ್ಯಸಭೆಯು ಬಹುಮತದ ಮೂಲಕ ಸ್ವೀಕರಿಸಿದ ಗೊತ್ತುವಳಿಯನ್ನು ಲೋಕಸಭೆಯು ಸ್ವೀಕರಿಸಬೇಕು.

*ಎಫ್) ಅಧಿಕಾರ ಮತ್ತು ಕರ್ತವ್ಯಗಳು:*

1. ಉಪರಾಷ್ಟ್ರಪತಿಗಳು ರಾಜ್ಯಸಭೆಯ ಪದನಿಮಿತ್ತ ಅಧ್ಯಕ್ಷರಾಗಿರುತ್ತಾರೆ.
2. ರಾಷ್ಟ್ರಪತಿಗಳು ರಾಜೀನಾಮೆ ನೀಡಿದರೆ, ನಿಧನ ಹೊಂದಿದರೆ, ವಿದೇಶಿ ಪ್ರವಾಸದಲ್ಲಿದ್ದರೆ ಉಪರಾಷ್ಟ್ರಪತಿಗಳು ಹಂಗಾಮಿ ರಾಷ್ಟ್ರಾಧ್ಯಕ್ಷರಾಗಿ ಕಾರ್ಯ ನಿರ್ವಹಿಸುತ್ತಾರೆ.

*ಜಿ) ವೇತನ ಮತ್ತು ಸವಲತ್ತುಗಳು:*

ಉಪರಾಷ್ಟ್ರಪತಿಗಳು ಸಂಸತ್ತು ಕಾಲಕಾಲಕ್ಕೆ ನಿಗದಿಪಡಿಸುವ ವೇತನ ಮತ್ತು ಸವಲತ್ತುಗಳನ್ನು ಪಡೆಯುತಾರೆ.ಪ್ರಸ್ತುತ ಇವರ ವೇತನ ಪ್ರತಿ ತಿಂಗಳಿಗೆ 1.25 ಲಕ್ಷ ರೂಗಳು. ನಿವೃತ್ತರಾದ ಮೇಲೆ ನಿವೃತ್ತಿ ವೇತನ ಪಡೆಯುತ್ತಾರೆ.

## ಪ್ರಧಾನಮಂತ್ರಿ ಮತ್ತು ಮಂತ್ರಿಮಂಡಲ:

ಸಂಸದೀಯ ಪ್ರಜಾಪ್ರಭುತ್ವ ವ್ಯವಸ್ಥೆಯಲ್ಲಿ ಪ್ರಧಾನಮಂತ್ರಿ ಪ್ರಮುಖ ಪಾತ್ರವನ್ನು ನಿರ್ವಹಿಸುತ್ತಾರೆ. ಇವರು ಕೇಂದ್ರ ಕಾರ್ಯಾಂಗದ ನೈಜ ಮುಖ್ಯಸ್ಥರಾಗಿರುತ್ತಾರೆ. ವಿಧಿ- 74 ರಾಷ್ಟ್ರಪತಿಗಳಿಗೆ ಸಲಹೆ ಮತ್ತು ಸಹಾಯವನ್ನು ನೀಡಲು ಪ್ರಧಾನಮಂತ್ರಿ ನೇತೃತ್ವದ ಮಂತ್ರಿಮಂಡಲವಿರಬೇಕು ಎಂದು ತಿಳಿಸುತ್ತದೆ. ಕೇಂದ್ರ ಕಾರ್ಯಾಂಗದ ಎಲ್ಲಾ ಅಧಿಕಾರಗಳು ರಾಷ್ಟ್ರಾಧ್ಯಕ್ಷರಲ್ಲಿದ್ದರು ಪ್ರಧಾನಮಂತ್ರಿ ನೇತೃತ್ವದ ಮಂತ್ರಿಮಂಡಲವೇ ಆ ಕಾರ್ಯಗಳನ್ನು ವಾಸ್ತವವಾಗಿ ನಿರ್ವಹಿಸುತ್ತದೆ. ಕೇಂದ್ರ ಸರಕಾರದ ಮುಖ್ಯಸ್ಥರಾದ

ಪ್ರಧಾನಮಂತ್ರಿಯು ಆಡಳಿತದ ಸಂಪೂರ್ಣ ಜವಾಬ್ದಾರಿಯನ್ನು ಹೊಂದಿರುತ್ತಾರೆ. ಸರ್ಕಾರದ ಯಶಸ್ಸು ಪ್ರಧಾನಮಂತ್ರಿಯನ್ನು ಅವಲಂಬಿಸಿರುತ್ತದೆ. ಆದ್ದರಿಂದ ಪ್ರಧಾನಮಂತ್ರಿಯು ಸೌರಮಂಡಲದಲ್ಲಿರುವ ಸೂರ್ಯನಂತೆ ಶೋಭಿಸುತ್ತಾರೆ.

## ಪ್ರಧಾನ ಮಂತ್ರಿಯ ನೇಮಕ:

ವಿಧಿ 75 ರ ಪ್ರಕಾರ ಪ್ರಧಾನಮಂತ್ರಿಗಳನ್ನು ರಾಷ್ಟ್ರಪತಿಗಳು ನೇಮಕ ಮಾಡುತ್ತಾರೆ. ಬಹುಮತ ಪಡೆದ ಪಕ್ಷದ ಅಥವಾ ಮಿತ್ರಪಕ್ಷಗಳ ನಾಯಕನನ್ನು ರಾಷ್ಟ್ರಾಧ್ಯಕ್ಷರು ಪ್ರಧಾನಮಂತ್ರಿಯೆಂದು ನಾಮಕರಣ ಮಾಡುತ್ತಾರೆ. ಪ್ರಧಾನಮಂತ್ರಿಯಾಗುವವರು ಲೋಕಸಭೆ ಅಥವಾ ರಾಜ್ಯಸಭೆಯ ಸದಸ್ಯರಾಗಿರಬೇಕು. ಸಂಸತ್ತಿನ ಉಭಯ ಸದನಗಳ ಸದಸ್ಯರಾಗಿಲ್ಲದಿದ್ದರೆ ಪ್ರಧಾನಮಂತ್ರಿಯಾಗಿ ಆಯ್ಕೆಯಾದವರು 6 ತಿಂಗಳೊಳಗೆ ಯಾವುದಾದರೊಂದು ಸದನದ ಸದಸ್ಯರಾಗಲೇಬೇಕು. ರಾಷ್ಟ್ರಪತಿಗಳು ಪ್ರಧಾನಮಂತ್ರಿಗೆ ಪ್ರಮಾಣವಚನವನ್ನು ಬೋಧಿಸುವರು. ಲೋಕಸಭೆಯಲ್ಲಿ ಬಹುಮತ ಹಾಗೂ ರಾಷ್ಟ್ರಪತಿಗಳ ವಿಶ್ವಾಸವಿರುವವರೆಗೂ ಪ್ರಧಾನಮಂತ್ರಿಗಳು ಅಧಿಕಾರದಲ್ಲಿರುತ್ತಾರೆ. ಸಂಸತ್ತಿನ ಸದಸ್ಯರಂತೆ ವೇತನ ಮತ್ತು ಸವಲತ್ತನ್ನು ಪಡೆಯುತ್ತಾರೆ.

## ಅಧಿಕಾರ ಮತ್ತು ಕಾರ್ಯಗಳು:

ಭಾರತದ ಪ್ರಧಾನಮಂತ್ರಿಗಳು ಸರ್ಕಾರದ ಮುಖ್ಯಸ್ಥರಾಗಿ ಕಾರ್ಯನಿರ್ವಹಿಸುತ್ತಾರೆ. ವಾಸ್ತವವಾಗಿ ಭಾರತ ಸರ್ಕಾರದ ಸಮಗ್ರ ಕಾರ್ಯಾಂಗೀಯ ಅಧಿಕಾರಗಳೆಲ್ಲವನ್ನು ರಾಷ್ಟ್ರಪತಿಯ ಹೆಸರಿನಲ್ಲಿ ಪ್ರಧಾನಮಂತ್ರಿಗಳ ನೇತೃತ್ವದ ಮಂತ್ರಿಮಂಡಲ ಚಲಾಯಿಸುತ್ತದೆ.

ಪ್ರಧಾನಮಂತ್ರಿಗಳು ಈ ಕೆಳಕಂಡ ಅಧಿಕಾರ ಮತ್ತು ಕಾರ್ಯಗಳನ್ನು ಹೊಂದಿರುತ್ತಾರೆ.

### 1) ಮಂತ್ರಿಮಂಡಲದ ರಚನೆ:

ಪ್ರಧಾನಮಂತ್ರಿಗಳು ಅಧಿಕಾರ ವಹಿಸಿಕೊಂಡ ನಂತರ ಅನುಭವ ಮತ್ತು ಹಿರಿತನವನ್ನು ಆಧರಿಸಿ ವಿವಿಧ ರಾಜ್ಯಗಳಿಗೆ ಮತ್ತು ಜನಾಂಗಗಳಿಗೆ ಸೂಕ್ತ ಪ್ರಾತಿನಿಧ್ಯತೆಯನ್ನು ನೀಡಿ, ಪಟ್ಟಿಯನ್ನು ತಯಾರಿಸಿ ರಾಷ್ಟ್ರಪತಿಗಳಿಗೆ ಸಲ್ಲಿಸುತ್ತಾರೆ. ಸದರಿ ಪಟ್ಟಿಗನುಗುಣವಾಗಿ ರಾಷ್ಟ್ರಪತಿಗಳು ಮಂತ್ರಿಗಳನ್ನು ನೇಮಕ ಮಾಡುತ್ತಾರೆ.

### 2) ಖಾತೆಗಳ ಹಂಚಿಕೆ:

ಪ್ರಧಾನಮಂತ್ರಿಗಳು ಖಾತೆಗಳನ್ನು ಹಂಚುವಾಗ ಮಂತ್ರಿಗಳ ಹಿನ್ನಲೆ, ಪರಿಣಿತಿ, ರಾಜಕೀಯ ಮತ್ತು ಆಡಳಿತದ ಅನುಭವಗಳನ್ನು ಗಮನಿಸಿ ಖಾತೆಗಳನ್ನು ಹಂಚುವ ಮತ್ತು ಮರುಹಂಚಿಕೆ ಮಾಡುವ ಅಧಿಕಾರ ಹೊಂದಿದ್ದಾರೆ. ಕೆಲವು ವೇಳೆ ತಮ್ಮ ವಿವೇಚನೆಗನುಗುಣವಾಗಿ ಕೆಲವರಿಗೆ ಖಾತೆಗಳನ್ನು ನೀಡಿರುವ ಉದಾಹರಣೆಗಳಿವೆ.

### 3) ಮಂತ್ರಿಮಂಡಲದ ನಾಯಕ:

ಪ್ರಧಾನಮಂತಿಗಳು ಮಂತ್ರಿಮಂಡಲದ ನಾಯಕರಾಗಿ ಕಾರ್ಯನಿರ್ವಹಿಸುವುದಲ್ಲದೆ, ಕ್ಯಾಬಿನೆಟ್ ಸಭೆಯನ್ನು ಕರೆಯುವ, ನಿರ್ಣಯಗಳನ್ನು ತೆಗೆದುಕೊಳ್ಳುವ ಮತ್ತು ಎಲ್ಲಾ

ಮಂತ್ರಿಗಳ ಕಾರ್ಯಗಳನ್ನು ಸಮನ್ವಯಗೊಳಿಸುವ ಅಧಿಕಾರವನ್ನು ಹೊಂದಿರುತ್ತಾರೆ.

**4) ರಾಷ್ಟ್ರಪತಿ ಮತ್ತು ಮಂತ್ರಿಮಂಡಲದ ನಡುವೆ ಸಂಪರ್ಕ ಸೇತುವೆ:**

ಪ್ರಧಾನಮಂತ್ರಿಗಳು ಮಂತ್ರಿಮಂಡಲದಲ್ಲಿ ತೆಗೆದುಕೊಳ್ಳುವ ಎಲ್ಲಾ ನಿರ್ಣಯಗಳನ್ನು ರಾಷ್ಟ್ರಪತಿಗಳ ಗಮನಕ್ಕೆ ತರುವುದಲ್ಲದೆ, ರಾಷ್ಟ್ರದ ಸಮಗ್ರ ಆಡಳಿತದ ಬಗ್ಗೆ ಮತ್ತು ಸಂಸತ್ತಿನಲ್ಲಿ ಮಂಡಿಸಬೇಕಾದ ಶಾಸನಗಳ ಬಗ್ಗೆ ರಾಷ್ಟ್ರಪತಿಗಳಿಗೆ ಮಾಹಿತಿಯನ್ನು ನೀಡುತ್ತಾರೆ. ಈ ರೀತಿ ಪ್ರಧಾನಮಂತ್ರಿಗಳು ರಾಷ್ಟ್ರಪತಿ ಮತ್ತು ಕ್ಯಾಬಿನೆಟ್‌ನ ನಡುವೆ ಸಂಪರ್ಕ ಸೇತುವೆಯಾಗಿ ಕಾರ್ಯನಿರ್ವಹಿಸುತ್ತಾರೆ.

**5) ಸಂಸತ್ತಿನ ನಾಯಕ:**

ಪ್ರಧಾನ ಮಂತ್ರಿಗಳು ಯಾವ ಸದನದ ಸದಸ್ಯರಾಗಿರುತ್ತಾರೊ ಅದರ ನಾಯಕರಾಗಿ ಕಾರ್ಯನಿರ್ವಹಿಸುವುದಲ್ಲದೆ ರಾಷ್ಟ್ರೀಯ ಮತ್ತು ಅಂತರಾಷ್ಟ್ರೀಯ ನೀತಿಗಳನ್ನು ಸಂಸತ್ತಿನಲ್ಲಿ ಪ್ರಕಟಿಸಿ, ಚರ್ಚೆಗೆ ಅವಕಾಶ ಕಲ್ಪಿಸುತ್ತಾರೆ. ಸದನದಲ್ಲಿ ಉದ್ಭವಿಸುವ ಪ್ರಶ್ನೆಗಳಿಗೆ ಮಂತ್ರಿಗಳು ಸಮರ್ಪಕವಾಗಿ ಉತ್ತರಿಸದಿದ್ದಾಗ ಅವುಗಳಿಗೆ ಸೂಕ್ತ ಉತ್ತರವನ್ನು ನೀಡುವ ಜವಾಬ್ದಾರಿ ಪ್ರಧಾನಮಂತ್ರಿಗಳಿಗೆ ಇರುತ್ತದೆ.

**6) ರಾಷ್ಟ್ರದ ನಾಯಕ:**

ಪ್ರಧಾನಮಂತ್ರಿಗಳು ರಾಷ್ಟ್ರದ ನಾಯಕರಾಗಿ ಅಂತರಾಷ್ಟ್ರೀಯ ಸಭೆಗಳಲ್ಲಿ ರಾಷ್ಟ್ರವನ್ನು ಪ್ರತಿನಿಧಿಸುವ ನಿಯೋಗಗಳ ಮುಖ್ಯಸ್ಥರಾಗಿರುತ್ತಾರೆ. ಕೆಲವು ತುರ್ತು ಸಂದರ್ಭಗಳಲ್ಲಿ ರಾಷ್ಟ್ರೀಯ ವಿಷಯಗಳಿಗೆ ಸಂಬಂಧಿಸಿದಂತೆ ರಾಷ್ಟ್ರವನ್ನು ಉದ್ದೇಶಿಸಿ ಭಾಷಣ ಮಾಡುತ್ತಾರೆ. ರಾಷ್ಟ್ರ ಮತ್ತು ಅಂತರಾಷ್ಟ್ರೀಯ ಮಟ್ಟದಲ್ಲಿ ತಮ್ಮ ವೈಯಕ್ತಿಕ ವರ್ಚಸ್ಸು ಮತ್ತು ನಾಯಕತ್ವವನ್ನು ಪ್ರತಿಬಿಂಬಿಸುತ್ತಾರೆ.

**7) ಪಕ್ಷದ ನಾಯಕ:**

ಪ್ರಧಾನಮಂತ್ರಿಗಳು ಬಹುಮತ ಪಡೆದ ಪಕ್ಷದ ನಾಯಕರಾಗಿರುತ್ತಾರೆ. ಆದುದರಿಂದ ದೇಶದ ಅಭಿವೃದ್ಧಿಯ ಹರಿಕಾರರು ಆಗಿರುತ್ತಾರೆ. ಪಕ್ಷದ ಚುನಾವಣಾ ಪ್ರಣಾಳಿಕೆಯಲ್ಲಿ ನೀಡಿದ ಆಶ್ವಾಸನೆಗಳನ್ನು ಕಾರ್ಯಗತಗೊಳಿಸುವ ಮೂಲಕ ಮುಂಬರುವ ಚುನಾವಣೆಗಳಲ್ಲಿ ಜನಬೆಂಬಲ ಗಳಿಸಲು ಶ್ರಮಿಸುತ್ತಾರೆ.

**8) ನೇಮಕಾತಿ ಅಧಿಕಾರಗಳು:**

ನೇಮಕಾತಿ ಕಾರ್ಯಗಳಲ್ಲಿ ಪ್ರಧಾನಮಂತ್ರಿಯ ಪಾತ್ರ ಮಹತ್ವದಾಗಿರುತ್ತದೆ, ಪ್ರಮುಖವಾಗಿ ಎಲ್ಲಾ ನೇಮಕಾತಿಗಳನ್ನು ರಾಷ್ಟ್ರಪತಿಗಳೇ ಮಾಡಿದರು ವಾಸ್ತವವಾಗಿ ಅವು ಪ್ರಧಾನಮಂತ್ರಿಗಳಿಂದ ಶಿಫಾರಸ್ಸು ಮಾಡಲ್ಪಟ್ಟಿರುತ್ತವೆ, ಭಾರತದ ಅಟಾರ್ನಿಜನರಲ್, ರಕ್ಷಣಾ ಪಡೆಗಳ ಮೂರು ವಿಭಾಗದ ದಂಡನಾಯಕರುಗಳು, ರಾಜ್ಯದ ರಾಜ್ಯಪಾಲರುಗಳು, ರಾಯಭಾರಿಗಳು, ವಿವಿಧ ಆಯೋಗಗಳ ಮುಖ್ಯಸ್ಥರು ಮತ್ತು ಸದಸ್ಯರುಗಳನ್ನು ಪ್ರಧಾನಿಯವರ ಶಿಫಾರಸ್ಸಿನ ಮೇರೆಗೆ ರಾಷ್ಟ್ರಪತಿಗಳು ನೇಮಕ ಮಾಡುತ್ತಾರೆ.

**9) ವಿಶೇಷ ಅಧಿಕಾರಗಳು**:

ಭಾರತದ ಪ್ರಧಾನಮಂತ್ರಿಗಳು ವಿದೇಶಾಂಗ ವ್ಯವಹಾರ, ರಾಷ್ಟ್ರದ ರಕ್ಷಣೆ, ಹಣಕಾಸು, ಗೃಹ ಮತ್ತು ಆರ್ಥಿಕ ವ್ಯವಹಾರಗಳಿಗೆ ಸಂಬಂಧಿಸಿದಂತೆ ವಿಶೇಷ ಅಧಿಕಾರಗಳನ್ನು ಹೊಂದಿರುತ್ತಾರೆ. ಅಲ್ಲದೆ ಯುದ್ಧ ಮತ್ತು ಶಾಂತಿಗೆ ಸಂಬಂಧಿಸಿದ ಅತಿ ಮುಖ್ಯ ನಿರ್ಧಾರಗಳನ್ನು ಕೈಗೊಳ್ಳುವ ಅಧಿಕಾರವು ಇವರಿಗಿದೆ.

**10) ಇತರೆ ಅಧಿಕಾರಗಳು:**

ನೀತಿ ಆಯೋಗ, ರಾಷ್ಟ್ರೀಯ ಅಭಿವೃದ್ಧಿ ಮಂಡಳಿ, ರಾಷ್ಟ್ರೀಯ ಭಾವೈಕ್ಯತೆ ಸಮಿತಿ ಮತ್ತು ಅಂತರಾಜ್ಯ ಸಮಿತಿಗಳ ಪದನಿಮಿತ್ತ ಅಧ್ಯಕ್ಷರಾಗಿ ಕಾರ್ಯನಿರ್ವಹಿಸುವುದಲ್ಲದೆ ರಾಷ್ಟ್ರದ ಹಿತಾಸಕ್ತಿಗಳನ್ನು ಕಾಪಾಡುವುದು ಇವರ ಪ್ರಮುಖ ಜವಾಬ್ದಾರಿಯಾಗಿರುತ್ತದೆ.

ಒಟ್ಟಿನಲ್ಲಿ ಪ್ರಧಾನಮಂತ್ರಿಗಳು ಕ್ಯಾಬಿನೆಟ್ ವ್ಯವಸ್ಥೆಯ ಕೇಂದ್ರ ಬಿಂದುವಾಗಿದ್ದಾರೆ. ಸರ್ಕಾರದ ಸ್ಥಿರತೆ ಮತ್ತು ಘನತೆ ಪ್ರಧಾನಮಂತ್ರಿಗಳ ಕಾರ್ಯದಕ್ಷತೆಯನ್ನು ಅವಲಂಬಿಸಿರುತ್ತದೆ. ರಾಷ್ಟ್ರದ ಪ್ರಜಾಪ್ರಭುತ್ವದ ಮೌಲ್ಯಗಳನ್ನು ಎತ್ತಿಹಿಡಿಯುವ ಗುರುತರವಾದ ಜವಾಬ್ದಾರಿ ಪ್ರಧಾನಮಂತ್ರಿಗಳ ಮೇಲಿದೆ.

## ಭಾರತದ ಪ್ರಧಾನ ಮಂತ್ರಿಗಳು

| **ಕ್ರಮ ಸಂಖ್ಯೆ** | **ಪ್ರಧಾನ ಮಂತ್ರಿಗಳು** | **ಆಡಳಿತಾವಧಿ** |
|---|---|---|
| 1. | ಪ. ಜವಹರ್ಲಾಲ್ ನೆಹರು | ಸೆಪ್ಟಂಬರ್ 02, 1946 ರಿಂದ ಮೇ, 27, 1964 |
| 2. | ಜಿ. ಎಲ್. ನಂದ | ಮೇ 27, 1964 ರಿಂದ ಜೂನ್ 08, 1964, ಮತ್ತು ಜನವರಿ 11, 1966 ರಿಂದ ಜನವರಿ 23,1966 |
| 3. | ಲಾಲ್ ಬಹದ್ದೂರ್ ಶಾಸ್ತ್ರಿ | ಜೂನ್ 9, 1964 ರಿಂದ ಜನವರಿ 10, 1966 |
| 4. | ಶ್ರೀಮತಿ ಇಂದಿರಾಗಾಂಧಿ | ಜನವರಿ 24, 1966 ರಿಂದ ಮಾರ್ಚ್ 23, 1977, ಜನವರಿ 14, 1980 ರಿಂದ ಅಕ್ಟೋಬರ್ 21, 1984 |
| 5. | ಮೊರಾರ್ಜಿದೇಸಾಯಿ | ಮಾರ್ಚ್ 24, 1977 ರಿಂದ ಜುಲೈ 15, 1979 |
| 6. | ಚರಣ್ ಸಿಂಗ್ | ಜುಲೈ 27, 1979 ರಿಂದ ಜನವರಿ 13, 1980 |
| 7. | ರಾಜೀವ್ ಗಾಂಧಿ | ಅಕ್ಟೋಬರ್ 31, 1984 ರಿಂದ ಡಿಸೆಂಬರ್ 2, 1989 |
| 8. | ವಿಶ್ವನಾಥ್ ಪ್ರತಾಪ್‌ಸಿಂಗ್ | ಡಿಸೆಂಬರ್ 2, 1989 ರಿಂದ ನವೆಂಬರ್ 9, 1990 |
| 9. | ಚಂದ್ರಶೇಖರ್ | ನವೆಂಬರ್ 10, 1990 ರಿಂದ ಜೂನ್ 20, 1991 |
| 10. | ಪಿ. ವಿ. ನರಸಿಂಹ ರಾವ್ | ಜೂನ್ 21, 1991 ರಿಂದ ಮೇ 15, 1996 |
| | | |

| | | |
|---|---|---|
| 11. | ಅಟಲ್‌ಬಿಹಾರಿ ವಾಜಪೇಯಿ | ಮೇ 16, 1996 ರಿಂದ ಮೇ 31, 1996 ಮಾರ್ಚ್ 19, 1998 ರಿಂದ ಮೇ 22, 2004 |
| 12. | ಎಚ್ ಡಿ. ದೇವೇಗೌಡ | ಜೂನ್ 1, 1996 ರಿಂ ಏಪ್ರಿಲ್ 20, 1997 |
| 13. | ಐ. ಕೆ. ಗುಜ್ರಾಲ್ | ಏಪ್ರಿಲ್ 21, 1997 ರಿಂದ ಮಾರ್ಚ್ 18, 1998 |
| 14. | ಡಾ. ಮನ್‌ಮೋಹನ್ ಸಿಂಗ್ | ಮೇ 22, 2004 ರಿಂದ 26 ಮೇ 2014 |
| 15. | ನರೇಂದ್ರ ಮೋದಿ | ಮೇ 26, 2014 ರಿಂದ |

## ಕೇಂದ್ರ ಮಂತ್ರಿಮಂಡಲ:

ನಮ್ಮ ಸಂವಿಧಾನದ 74 ನೇ ವಿಧಿಯು ರಾಷ್ಟ್ರಾಧ್ಯಕ್ಷರಿಗೆ ಸಹಾಯ ಮತ್ತು ಸಲಹೆಯನ್ನು ನೀಡುವುದಕ್ಕಾಗಿ ಪ್ರಧಾನಮಂತ್ರಿ ನೇತೃತ್ವದ ಮಂತ್ರಿಮಂಡಲವಿರಬೇಕೆಂದು ತಿಳಿಸುತ್ತದೆ. ಕೇಂದ್ರ ಸರ್ಕಾರದ ಕಾರ್ಯಗಳನ್ನು ಮತ್ತು ಆಡಳಿತ ವ್ಯವಸ್ಥೆಯನ್ನು ಸುವ್ಯವಸ್ಥಿತವಾಗಿ ನಿರ್ವಹಿಸಲು ಕೇಂದ್ರ ಮಂತ್ರಿಮಂಡಲವಿದೆ.

ರಾಷ್ಟ್ರಾಧ್ಯಕ್ಷರು ಪ್ರಧಾನಮಂತ್ರಿಯ ಶಿಫಾರಸ್ಸಿನ ಮೇರೆಗೆ ಮಂತ್ರಿಗಳನ್ನು ನೇಮಕ ಮಾಡುತ್ತಾರೆ. ಪ್ರಧಾನಮಂತ್ರಿಗಳು ಮಂತ್ರಿಗಳಿಗೆ ವಿವಿಧ ಖಾತೆಗಳನ್ನು ಹಂಚಿಕೆ ಮಾಡುತ್ತಾರೆ. ಮಂತ್ರಿಮಂಡಲದ ಎಲ್ಲಾ ಸದಸ್ಯರುಗಳು ತಾವು ಕೈಗೊಳ್ಳುವ ನಿರ್ಣಯಗಳ ವಿಷಯದಲ್ಲಿ ವೈಯಕ್ತಿಕವಾಗಿ ಮತ್ತು ಸಾಮೂಹಿಕವಾಗಿ ಲೋಕಸಭೆಗೆ ಜವಾಬ್ದಾರರಾಗಿರುತ್ತಾರೆ.

## ಮಂತ್ರಿಮಂಡಲದ ವಿಧಗಳು

ಮಂತ್ರಿಮಂಡಲದಲ್ಲಿ ಮುಖ್ಯವಾಗಿ ಮೂರು ವಿಧದ ಮಂತ್ರಿಗಳಿರುತ್ತಾರೆ.

1. ಸಂಪುಟ ದರ್ಜೆಯ ಮಂತ್ರಿಗಳು
2. ಎ) ರಾಜ್ಯಮಂತ್ರಿಗಳು (ಸ್ವತಂತ್ರ ನಿರ್ವಹಣೆ)
   ಬಿ) ರಾಜ್ಯಮಂತ್ರಿಗಳು
3. ಉಪಮಂತ್ರಿಗಳು

**1. ಸಂಪುಟ ದರ್ಜೆಯ ಮಂತ್ರಿಗಳು (Cabinet rank ministers):**

ಇವರು ಸ್ವತಂತ್ರ ಖಾತೆ ಹೊಂದಿ ಕ್ಯಾಬಿನೆಟ್ ಸಭೆಗಳಲ್ಲಿ ಭಾಗವಹಿಸುತ್ತಾರೆ ಕ್ಯಾಬಿನೆಟ್ ರಾಷ್ಟ್ರದ ಧೋರಣೆಗಳನ್ನು ರೂಪಿಸುತ್ತದೆ.

**2. ಎ) ರಾಜ್ಯಮಂತ್ರಿಗಳು (ಸ್ವತಂತ್ರ ನಿರ್ವಹಣೆ) (State ministers independent):**

ಇವರು ಕೇಂದ್ರ ಸರಕಾರದಲ್ಲಿ ನಿಗದಿತ ಸ್ವತಂತ್ರ ಖಾತೆಯನು ಹೊಂದಿರುತ್ತಾರೆ. ಕ್ಯಾಬಿನೆಟ್‌ನ ಆಹ್ವಾನದ ಮೇರೆಗೆ ಮಾತ್ರ ಕ್ಯಾಬಿನೆಟ್ ಸಭೆಗಳಲ್ಲಿ ಭಾಗವಹಿಸುತ್ತಾರೆ.

**ಬಿ) ರಾಜ್ಯ ಸಚಿವರು:** ಇವರು ಸಂಪುಟ ದರ್ಜೆಯ ಸಚಿವರಿಗೆ ಸಹಾಯಕರಾಗಿ ಕಾರ್ಯ ನಿರ್ವಹಿಸುತ್ತಾರೆ.

**3. ಉಪಮಂತ್ರಿಗಳು:**

ಪ್ರಧಾನ ಮಂತ್ರಿಗಳು ಅಗತ್ಯವೆಂದು ಕಂಡು ಬಂದರೆ ಉಪಮಂತ್ರಿಗಳನ್ನು ನೇಮಕ ಮಾಡಬಹುದಾಗಿದೆ. ಇವರು ಸಾಮಾನ್ಯವಾಗಿ ಸಂಪುಟ ದರ್ಜೆಯ ಸಚಿವರಿಗೆ ಮತ್ತು ರಾಜ್ಯ ದರ್ಜೆಯ ಮಂತ್ರಿಗಳಿಗೆ ಸಹಾಯಕರಾಗಿರುತ್ತಾರೆ.

## ಮಂತ್ರಿಮಂಡಲದ ಗಾತ್ರ:

ಸಂವಿಧಾನದಲ್ಲಿ ಮಂತ್ರಿಮಂಡಲದ ಗಾತ್ರವನ್ನು ನಿಗದಿಪಡಿಸಿರಲಿಲ್ಲ. 2003 ರಲ್ಲಿ ಅಂಗೀಕರಿಸಿದ ಸಂವಿಧಾನದ 91 ನೇ ತಿದ್ದುಪಡಿ ಕಾಯ್ದೆ ಅನ್ವಯ ಮಂತ್ರಿಮಂಡಲದ ಗಾತ್ರವು ಲೋಕಸಭೆಯ ಒಟ್ಟು ಸದಸ್ಯರ 15% ಕ್ಕಿಂತ ಹೆಚ್ಚಿರಬಾರದು.

ಪ್ರಧಾನಮಂತ್ರಿಯವರ ನೇತೃತ್ವದಲ್ಲಿ ರಚನೆಗೊಂಡ ಮಂತ್ರಿಮಂಡಲವು ಸಂಸದೀಯ ಪ್ರಜಾಪ್ರಭುತ್ವದ ವಿಧಿ ವಿಧಾನದನ್ವಯ ರಾಷ್ಟ್ರದ ಉನ್ನತಿಗಾಗಿ ಕೆಲಸ ಮಾಡುತ್ತದೆ. ರಾಷ್ಟ್ರದ ಸರ್ವತೋಮುಖ ಪ್ರಗತಿ ಪ್ರಧಾನಮಂತ್ರಿ ಹಾಗೂ ಮಂತ್ರಿಮಂಡಲದ ಕಾರ್ಯದಕ್ಷತೆಯನ್ನು ಅವಲಂಬಿಸಿದೆ.

## ಅಭ್ಯಾಸ

**I. ಒಂದು ವಾಕ್ಯದಲ್ಲಿ ಉತ್ತರಿಸಿ.**

1. ರಾಷ್ಟ್ರಪತಿ ಚುನಾವಣಾ ವಿಧಾನವನ್ನು ಯಾವ ಸಂವಿಧಾನದಿಂದ ಎರವಲು ಪಡೆಯಲಾಗಿದೆ?
2. ರಾಷ್ಟ್ರಪತಿಯ ಅಧಿಕಾರವಧಿ ಎಷ್ಟು?
3. ತುರ್ತು ಪರಿಸ್ಥಿತಿ ಘೋಷಿಸುವ ಅಧಿಕಾರವನ್ನು ಯಾರು ಹೊಂದಿರುತ್ತಾರೆ?
4. ಉಪರಾಷ್ಟ್ರಪತಿಗೆ ಪ್ರಮಾಣವಚನವನ್ನು ಯಾರು ಬೋಧಿಸುತ್ತಾರೆ?
5. ಪ್ರಧಾನಮಂತ್ರಿಯನ್ನು ಯಾರು ನೇಮಕ ಮಾಡುತ್ತಾರೆ?

**II. 'ಅ' ಪಟ್ಟಿಗೆ 'ಬ' ಪಟ್ಟಿಯನ್ನು ಹೊಂದಿಸಿ ಬರೆಯಿರಿ.**

| ಅ | ಬ |
|---|---|
| 1. ರಾಷ್ಟ್ರಪತಿ | a. ರಾಜ್ಯಸಭೆಯ ಮುಖ್ಯಸ್ಥರು |
| 2. ಉಪರಾಷ್ಟ್ರಪತಿ | b. ರಾಷ್ಟ್ರದ ಮುಖ್ಯಸ್ಥರು |
| 3. ಪ್ರಧಾನಮಂತ್ರಿ | c. ಲೋಕಸಭೆಯ ಮುಖ್ಯಸ್ಥರು |
| 4. ಸಭಾಪತಿ | d. ಕೇಂದ್ರ ಸರ್ಕಾರದ ಮುಖ್ಯಸ್ಥರು |
| | e. ವಿಧಾನಸಭೆಯ ಮುಖ್ಯಸ್ಥರು |

**III. ಎರಡು ಅಥವಾ ಮೂರು ವಾಕ್ಯಗಳಲ್ಲಿ ಉತ್ತರಿಸಿ.**

1. ರಾಷ್ಟ್ರಪತಿ ಚುನಾವಣೆಯಲ್ಲಿ ಯಾರು ಭಾಗವಹಿಸುತ್ತಾರೆ?
2. ತುರ್ತು ಪರಿಸ್ಥಿತಿಯ ವಿಧಗಳಾವುವು?

3. ಮಂತ್ರಿಮಂಡಲದ ಗಾತ್ರವನ್ನು ತಿಳಿಸಿರಿ.
4. ಉಪರಾಷ್ಟ್ರಪತಿ ಚುನಾವಣೆಯಲ್ಲಿ ಯಾರು ಭಾಗವಹಿಸುತ್ತಾರೆ?
5. ಉಪರಾಷ್ಟ್ರಪತಿ ವೇತನವನ್ನು ಯಾರು ನಿರ್ಧರಿಸುತ್ತಾರೆ? ಮತ್ತು ಪ್ರಸ್ತುತ ಎಷ್ಟಿದೆ?

**IV. ನಾಲ್ಕು ಅಥವಾ ಐದು ವಾಕ್ಯಗಳಲ್ಲಿ ಉತ್ತರಿಸಿ.**

1. ರಾಷ್ಟ್ರಪತಿಯವರ ಚುನಾವಣಾ ವಿಧಾನವನ್ನು ತಿಳಿಸಿರಿ.
2. ಉಪರಾಷ್ಟ್ರಪತಿಯಾಗಲು ಇರುವ ಅರ್ಹತೆಗಳೇನು?
3. ಹಣಕಾಸು ತುರ್ತು ಪರಿಸ್ಥಿತಿಯನ್ನು ಯಾವಾಗ ಘೋಷಿಸಲಾಗುತ್ತದೆ?
4. ರಾಷ್ಟ್ರಪತಿಯವರ ಸೈನಿಕ ಅಧಿಕಾರಗಳನ್ನು ತಿಳಿಸಿ.
5. ಉಪರಾಷ್ಟ್ರಪತಿಯವರ ಅಧಿಕಾರ ಮತ್ತು ಕಾರ್ಯಗಳನ್ನು ತಿಳಿಸಿ.

**V. ಎಂಟು ಅಥವಾ ಹತ್ತು ವಾಕ್ಯಗಳಲ್ಲಿ ಉತ್ತರಿಸಿ.**

1. ರಾಷ್ಟ್ರಪತಿಯವರ ಮಹಾಭಿಯೋಗ ಪ್ರಕ್ರಿಯೆಯನ್ನು ವಿವರಿಸಿ.
2. ರಾಷ್ಟ್ರಾಧ್ಯಕ್ಷರ ಪ್ರಸ್ತುತದ ಸಂವಿಧಾನಾತ್ಮಕ ಸ್ಥಾನಮಾನವನ್ನು ತಿಳಿಸಿರಿ.
3. ಪ್ರಧಾನಮಂತ್ರಿಯ ಅಧಿಕಾರ ಮತ್ತು ಕಾರ್ಯಗಳನ್ನು ವಿವರಿಸಿ.
4. ಮಂತ್ರಿಮಂಡಲದ ವಿಧಗಳನ್ನು ವಿವರಿಸಿ.

**ಸಲಹಾತ್ಮಕ ಚಟುವಟಿಕೆಗಳು:**

1. ಶಾಲೆಗಳಲ್ಲಿ ರಾಷ್ಟ್ರಪತಿ ಚುನಾವಣೆಯ ಅಣುಕು ಪ್ರದರ್ಶನವನ್ನು ಏರ್ಪಡಿಸುವುದು.
2. ಪ್ರಧಾನಮಂತ್ರಿಯ ಅಧಿಕಾರ ಮತ್ತು ಕಾರ್ಯಗಳನ್ನು ಪಟ್ಟಿ ಮಾಡುವುದು.

# ಅಧ್ಯಾಯ- 6 ಕೇಂದ್ರ ಶಾಸಕಾಂಗ (UNION LEGISLATURE)

## ಕಲಿಕೆಯ ಉದ್ದೇಶಗಳು:

1. ಸಂಸದೀಯ ಮಾದರಿ ಸರ್ಕಾರ ಪದ್ಧತಿಯ ಬಗ್ಗೆ ಅರಿವು ಮೂಡಿಸುವುದು.
2. ಕೇಂದ್ರ ಶಾಸಕಾಂಗದ ರಚನೆ, ಪ್ರಾಮುಖ್ಯತೆ ಹಾಗೂ ಸ್ಥಾನಮಾನಗಳನ್ನು ಅರಿಯುವುದು.
3. ರಾಜ್ಯಸಭೆಯ ಅಗತ್ಯತೆ, ಅಧಿಕಾರ ಮತ್ತು ಕಾರ್ಯಗಳನ್ನು ತಿಳಿಯುವುದು.
4. ಲೋಕಸಭೆಯ ಮಹತ್ವ ಹಾಗೂ ಅಧಿಕಾರ ಮತ್ತು ಕಾರ್ಯಗಳ ಬಗ್ಗೆ ಅರಿವು ಮೂಡಿಸುವುದು.
5. ಲೋಕಸಭೆಯ ಸ್ಪೀಕರ್ ಸ್ಥಾನದ ಬಗ್ಗೆ ತಿಳುವಳಿಕೆ ಮೂಡಿಸುವುದು.

"ಸಂಸತ್ತು ಜನಾಧಿಕಾರದ ದೇಗುಲವಾಗಿದೆ". **ಡಾ. ಬಿ. ಆರ್. ಅಂಬೇಡ್ಕರ್.**

ಭಾರತದ ಸಂಸತ್ತು ದ್ವಿಸದನ ಶಾಸಕಾಂಗವಾಗಿದೆ. ನಮ್ಮ ಸಂವಿಧಾನದ ವಿಧಿ 79 ರನ್ವಯ ಸಂಸತ್ತು ರಾಷ್ಟ್ರಪತಿ, ರಾಜ್ಯಸಭೆ ಮತ್ತು ಲೋಕಸಭೆಗಳನ್ನು ಒಳಗೊಂಡಿರುತ್ತದೆ. ನಮ್ಮ ಕೇಂದ್ರೀಯ ಶಾಸಕಾಂಗವನ್ನು ಸಂಸತ್ತು ಎಂದು ಕರೆಯುವಂತೆ ಇತರ ರಾಷ್ಟ್ರಗಳಲ್ಲಿ ಬೇರೆ ಬೇರೆ ಹೆಸರುಗಳಿಂದ ಕರೆಯುತ್ತಾರೆ.

## ವಿವಿಧ ದೇಶಗಳ ಸಂಸತ್ತಿನ ಹೆಸರು:

| | |
|---|---|
| ಬ್ರಿಟನ್, ಭಾರತ, ಕೆನಡಾ | ಪಾರ್ಲಿಮೆಂಟ್ (ಸಂಸತ್ತು) |
| ಜಪಾನ್ | ಡಯಟ್ |
| ಅಮೇರಿಕಾ | ಕಾಂಗ್ರೆಸ್ |
| ನೇಪಾಳ | ರಾಷ್ಟ್ರೀಯ ಪಂಚಾಯತ್ |
| ಪಾಕಿಸ್ತಾನ | ನ್ಯಾಷನಲ್ ಅಸೆಂಬ್ಲಿ |
| ಬಾಂಗ್ಲಾದೇಶ | ಜಡಿಯಾ ಸನಸದ್ |
| ಭೂತಾನ್ | ತ್ಸಂಗ್‌ಡು. |

ನಮ್ಮ ಸಂವಿಧಾನದ 5 ನೇ ಭಾಗದಲ್ಲಿರುವ 79 ರಿಂದ 122 ನೇ ವಿಧಿಯವರೆಗಿನ ವಿಧಿಗಳು ಸಂಸತ್ತಿನ 2 ಸದನಗಳಾದ ರಾಜ್ಯಸಭೆ ಮತ್ತು ಲೋಕಸಭೆಗಳ ರಚನೆ, ಅವಧಿ, ಅಧಿಕಾರ ಮತ್ತು ಕಾರ್ಯಗಳ ಕುರಿತು ವಿವರಿಸುತ್ತವೆ.

ಭಾರತದ ಸಂಸತ್ತು

1. ರಾಷ್ಟ್ರಪತಿ

2. ರಾಜ್ಯಸಭೆ
3. ಲೋಕಸಭೆ

## ರಾಜ್ಯ ಸಭೆ (Council of States):

ರಾಜ್ಯಸಭೆಯು ರಾಜ್ಯಗಳನ್ನು ಪ್ರತಿನಿಧಿಸುವ ಸದನವಾಗಿದ್ದು, ಸಂಸತ್ತಿನ ಮೇಲ್ಮನೆಯಾಗಿರುತ್ತದೆ. ಇದನ್ನು ಹಿರಿಯರ ಸದನ ಅಥವಾ ಬುದ್ದಿವಂತರ ಸದನವೆಂತಲೂ ಕರೆಯುವರು. ಅಮೆರಿಕಾ ಸಂಯುಕ್ತ ಸಂಸ್ಥಾನದಲ್ಲಿ ಮೇಲ್ಮನೆಯನ್ನು "ಸೆನೆಟ್" ಎಂತಲೂ ಯುನೈಟೆಡ್ ಕಿಂಗ್‌ಡಮ್‌ನಲ್ಲಿ "ಹೌಸ್ ಆಫ್ ಲಾರ್ಡ್ಸ್" ಎಂತಲೂ ಕರೆಯುವರು.

**ರಾಜ್ಯಸಭೆಯ ರಚನೆ:**

**ಎ) ಗಾತ್ರ:**

ಸಂವಿಧಾನದ ವಿಧಿ 80 ರನ್ವಯ ರಾಜ್ಯಸಭೆಯ ಗರಿಷ್ಠ ಸದಸ್ಯರ ಸಂಖ್ಯೆಯು 250 ಇವರಲ್ಲಿ 238 ಸದಸ್ಯರು ಎಲ್ಲ ರಾಜ್ಯಗಳ ವಿಧಾನ ಸಭೆಗಳಿಂದ ಮತ್ತು ದೆಹಲಿ ಹಾಗೂ ಪುದುಚೇರಿ ಕೇಂದ್ರಾಡಳಿತ ಪ್ರದೇಶಗಳಿಂದ ಆಯ್ಕೆಯಾಗುತ್ತಾರೆ. 12 ಸದಸ್ಯರನ್ನು, ಕಲೆ, ಸಾಹಿತ್ಯ, ವಿಜ್ಞಾನ, ಸಮಾಜಸೇವಾ ಕ್ಷೇತ್ರಗಳಲ್ಲಿ ವಿಶಿಷ್ಟ ಸಾಧನೆ ಅಥವಾ ಪ್ರಾಯೋಗಿಕ ಅನುಭವ ಹೊಂದಿದವರನ್ನು ರಾಷ್ಟ್ರಾಧ್ಯಕ್ಷರು ನಾಮಕರಣ ಮಾಡುತ್ತಾರೆ.

ರಾಜ್ಯಸಭೆಯ ಪ್ರಸ್ತುತ ಸದಸ್ಯರ ಸಂಖ್ಯೆಯನ್ನು 245 ಇವರುಗಳಲ್ಲಿ 233 ಸದಸ್ಯರು ವಿಧಾನಸಭೆಯ ಸದಸ್ಯರಿಂದ ಆಯ್ಕೆಯಾದವರು. 12 ಸದಸ್ಯರು ರಾಷ್ಟ್ರಾಧ್ಯಕ್ಷರಿಂದ ನಾಮಕರಣಗೊಂಡವರು. ಕರ್ನಾಟಕದಿಂದ ರಾಜ್ಯಸಭೆಗೆ 12 ಸದಸ್ಯರು ಚುನಾಯಿತರಾಗುತ್ತಾರೆ.

**ಬಿ) ಅರ್ಹತೆಗಳು:**

1. ಭಾರತದ ನಾಗರಿಕರಾಗಿರಬೇಕು
2. ಕನಿಷ್ಠ 30 ವರ್ಷ ವಯಸ್ಸನ್ನು ಹೊಂದಿರಬೇಕು
3. ಯಾವುದೇ ಲಾಭಾದಾಯಕ ಹುದ್ದೆಯನ್ನು ಹೊಂದಿರಬಾರದು
4. ಕಾಲಕಾಲಕ್ಕೆ ಸಂಸತ್ತು ನಿರ್ಧರಿಸುವ ಇತರ ಅರ್ಹತೆಗಳನ್ನು ಹೊಂದಿರಬೇಕು.

**ಸಿ) ಅಧಿಕಾರಾವಧಿ:**

ರಾಜ್ಯಸಭೆಯು ಶಾಶ್ವತ ಸದನವಾಗಿರುತ್ತದೆ. ಸದಸ್ಯರ ಅಧಿಕಾರಾವಧಿ 6 ವರ್ಷಗಳಾಗಿರುತ್ತದೆ. ಪ್ರತಿ 2 ವರ್ಷಗಳಿಗೊಮ್ಮೆ 1/ 3 ರಷ್ಟು ಸದಸ್ಯರು ನಿವೃತ್ತರಾಗುತ್ತಾರೆ. ಮತ್ತು ಅಷ್ಟೇ ಸಂಖ್ಯೆಯ ಸದಸ್ಯರು ಪುನಃ ಆಯ್ಕೆಯಾಗುತ್ತಾರೆ.

**ಡಿ) ಅಧಿವೇಶನಗಳು:**

ಒಂದು ಅಧಿವೇಶನದಿಂದ ಇನ್ನೊಂದು ಅಧಿವೇಶನದ ಮಧ್ಯ ಗರಿಷ್ಠ ಅಂತರ 6 ತಿಂಗಳು ಮೀರಬಾರದು. ಪ್ರಸ್ತುತ ಮೂರು ಅಧಿವೇಶನಗಳನ್ನು ನಡೆಸಲಾಗುತ್ತದೆ.

1. ಬಜೆಟ್ ಅಧಿವೇಶನ
2. ಬೇಸಿಗೆ ಕಾಲದ ಅಧಿವೇಶನ
3. ಚಳಿಗಾಲದ ಅಧಿವೇಶನ

**ಇ) ಕೋರಂ:**

ಅಧಿವೇಶನ ನಡೆಸಲು ಅಗತ್ಯವಿರುವ ಕನಿಷ್ಠ ಸದಸ್ಯರ ಸಂಖ್ಯೆಯೇ ಕೋರಂ ಆಗಿರುತ್ತದೆ. ರಾಜ್ಯಸಭೆಯ ಒಟ್ಟು ಸದಸ್ಯರ 1/ 10 ರಷ್ಟು ಸದಸ್ಯರ ಉಪಸಿತಿಯು ಕೋರಂ ಆಗಿರುತ್ತದೆ. ರಾಜ್ಯಸಭೆಯ ಅಧಿವೇಶನ ನಡೆಸಲು ಕನಿಷ್ಠ 25 ಸದಸ್ಯರ ಉಪಸ್ಥಿತಿಯು ಅಗತ್ಯವಾಗಿರುತ್ತದೆ.

**ಎಫ್) ಚುನಾವಣೆ:**

ರಾಜ್ಯಸಭೆಯ ಸದಸ್ಯರನ್ನು ಪರೋಕ್ಷ ಚುನಾವಣೆಯ ಮೂಲಕ ಆಯ್ಕೆ ಮಾಡಲಾಗುತ್ತದೆ. ಇವರು ರಾಜ್ಯಗಳ ವಿಧಾನ ಸಭಾ ಸದಸ್ಯರಿಂದ ಏಕಮತ ವರ್ಗಾವಣಾ ಪ್ರಮಾಣನುಗುಣ ಪ್ರಾತಿನಿಧ್ಯ ಪದ್ಧತಿಗೆ ಅನುಗುಣವಾಗಿ ಗುಪ್ತ ಮತದಾನದ ಮೂಲಕ ಆಯ್ಕೆಯಾಗುತ್ತಾರೆ.

**ಜಿ) ವೇತನ ಸೌಲಭ್ಯಗಳು:**

ರಾಜ್ಯಸಭಾ ಸದಸ್ಯರ ವೇತನ ಮತ್ತು ಸೌಲಭ್ಯಗಳನ್ನು ಸಂಸತ್ತು ಕಾಲಕಾಲಕ್ಕೆ ನಿರ್ಧರಿಸುತ್ತದೆ. ಇವರು ಉಚಿತ ದೂರವಾಣಿ, ಪ್ರಯಾಣ ಭತ್ಯೆ ವೇತನ, ನಿವೃತ್ತಿವೇತನ ಮುಂತಾದ ಸೇವಾ ಸೌಲಭ್ಯಗಳನ್ನು ಪಡೆಯುತ್ತಾರೆ.

**ಸಭಾಧ್ಯಕ್ಷ ಮತ್ತು ಉಪಸಭಾಧ್ಯಕ್ಷ:**

ಉಪರಾಷ್ಟ್ರಪತಿಗಳೂ ರಾಜ್ಯಸಭೆಯು ಪದನಿಮಿತ್ತ ಅಧ್ಯಕ್ಷರಾಗಿರುತ್ತಾರೆ. ಆದರೆ ಇವರು ರಾಜ್ಯಸಭೆಯ ಸದಸ್ಯರಾಗಿರುವುದಿಲ್ಲ. ರಾಜ್ಯಸಭೆಯ ಸದಸ್ಯರಲ್ಲಿಯೇ ಒಬ್ಬರನ್ನು ಉಪಸಭಾಧ್ಯಕ್ಷರನ್ನಾಗಿ ಆಯ್ಕೆ ಮಾಡಲಾಗುತ್ತದೆ. ಸಭಾಧ್ಯಕ್ಷರ ಅನುಪಸ್ಥಿತಿಯಲ್ಲಿ ಉಪಸಭಾಧ್ಯಕ್ಷರು ರಾಜ್ಯಸಭೆಯ ಕಾರ್ಯಕಲಾಪಗಳನ್ನು ನಿರ್ವಹಿಸುತ್ತಾರೆ.

### *ಅಧಿಕಾರ ಮತ್ತು ಕಾರ್ಯಗಳು:*

ರಾಜ್ಯಸಭೆಗೆ ವಿವಿಧ ಅಧಿಕಾರಗಳಿವೆ ಅವುಗಳು ಇಂತಿವೆ.

### 1. ಶಾಸನೀಯ ಅಧಿಕಾರಗಳು:

ಎ) ಈಗಾಗಲೇ ತಿಳಿಸಿರುವಂತೆ ನಮ್ಮ ಸಂವಿಧಾನದ 7 ನೇ ಅನುಸೂಚಿಯಲ್ಲಿ ನಮೂದಿಸಿರುವಂತೆ ಕೇಂದ್ರ ಸರ್ಕಾರ ಮತ್ತು ರಾಜ್ಯ ಸರ್ಕಾರಗಳ ನಡುವೆ ಅಧಿಕಾರ ವಿಭಜನೆಯಾಗಿದೆ. ಲೋಕಸಭೆ ಹಾಗೂ ರಾಜ್ಯಸಭೆಗೆ ಕೇಂದ್ರ ಪಟ್ಟಿ ಹಾಗೂ ಸಮವರ್ತಿ ಪಟ್ಟಿಯಲ್ಲಿನ ವಿಷಯಗಳ ಮೇಲೆ ಶಾಸನ ರಚಿಸುವ ಅಧಿಕಾರವಿದೆ.

ಬಿ) ಹಣಕಾಸು ಮಸೂದೆಯನ್ನು ಹೊರತುಪಡಿಸಿ, ಸಾಮಾನ್ಯ ಮಸೂದೆಗಳಿಗೆ ಎರಡೂ ಸದನಗಳ ಒಪ್ಪಿಗೆ ಅಗತ್ಯವಿರುತ್ತದೆ.

ಸಿ) ಸಾಮಾನ್ಯ ಮಸೂದೆಯನ್ನು ಯಾವ ಸದನದಲ್ಲಾದರು ಮಂಡಿಸಬಹುದು. ಲೋಕಸಭೆಯಲ್ಲಿ ಅಂಗಿಕೃತವಾಗಿ ರಾಜ್ಯಸಭೆಗೆ ಬಂದ ಮಸೂದೆಗಳನ್ನು ರಾಜ್ಯಸಭೆಯು ತಿರಸ್ಕರಿಸುವ ಹಾಗೂ ತಡೆ ಹಿಡಿಯುವ ಅಧಿಕಾರವನ್ನು ಹೊಂದಿದೆ.

### 2. ಹಣಕಾಸಿನ ಅಧಿಕಾರಗಳು:

ಹಣಕಾಸಿಗೆ ಸಂಬಂಧಿಸಿದ ಮಸೂದೆಗಳನ್ನು ಮೊದಲು ಲೋಕಸಭೆಯಲ್ಲಿಯೇ ಮಂಡಿಸಬೇಕು. ಲೋಕಸಭೆ ಅಂಗೀಕರಿಸಿದ ಹಣಕಾಸು ಮಸೂದೆಯನ್ನು ರಾಜ್ಯಸಭೆ ಕೇವಲ 14 ದಿನಗಳವರೆಗೆ ಮಾತ್ರ ತಡೆಹಿಡಿಯಬಹುದು. ಆದುದರಿಂದ ರಾಜ್ಯಸಭೆಗೆ ಹಣಕಾಸು ವಿಷಯದಲ್ಲಿ ಲೋಕಸಭೆಗಿರುವಷ್ಟು ಅಧಿಕಾರವಿಲ್ಲ.

### 3. ಸಂವಿಧಾನಾತ್ಮಕ ಅಧಿಕಾರಗಳು:

ಸಂವಿಧಾನ ತಿದ್ದುಪಡಿ ಮಸೂದೆಯನ್ನು ಕಡ್ಡಯವಾಗಿ ಎರಡು ಸದನಗಳಲ್ಲಿ ಪ್ರತ್ಯೇಕವಾಗಿ ಮಂಡಿಸಲಾಗುವುದು ವಿಧಿ- 368 ರನ್ವಯ ಸಂವಿಧಾನ ತಿದ್ದುಪಡಿ ಮಸೂದೆಗೆ 2 ಸದನಗಳ ಅನುಮತಿ ಕಡ್ಡಾಯವಾಗಿರುತ್ತದೆ.

### 4. ಚುನಾವಣಾ ಅಧಿಕಾರಗಳು:

ನಾಮಕರಣಗೊಂಡ ಸದಸ್ಯರನ್ನು ಹೊರತುಪಡಿಸಿ ಉಳಿದ ಸದಸ್ಯರು ರಾಷ್ಟ್ರಪತಿ ಮತ್ತು ಉಪರಾಷ್ಟ್ರಪತಿಗಳ ಚುನಾವಣೆಯಲ್ಲಿ ಮತ ಚಲಾಯಿಸುತ್ತಾರೆ. ಕೆಲವು ವಿಷಯಗಳಲ್ಲಿ ಉಭಯ ಸದನಗಳಿಗೆ ಸಮಾನ ಅಧಿಕಾರವಿದೆ ಅವುಗಳಲ್ಲಿ ಕೆಲವು ಇಂತಿವೆ.

1. ಸಂವಿಧಾನ ತಿದ್ದುಪಡಿ ಸಂದರ್ಭದಲ್ಲಿ.
2. ರಾಷ್ಟ್ರಪತಿ, ಉಪಾರಾಷ್ಟ್ರಪತಿಗಳ ಚುನಾವಣೆ ಮತ್ತು ಪದಚ್ಯುತಿ ಸಂದರ್ಭದಲ್ಲಿ.
3. ಸುಗ್ರೀವಾಜ್ಞೆಗಳನ್ನು ಕಾನೂನುಗಳನ್ನಾಗಿ ಮಾಡುವ ಸಂದರ್ಭದಲ್ಲಿ ರಾಜ್ಯಸಭೆಗೂ ಲೋಕಸಭೆಯಷ್ಟೆ ಅಧಿಕಾರವಿದೆ.

ಒಟ್ಟಿನಲ್ಲಿ ಪ್ರತಿಭಾನಿತ್ವರ ಸದನವೆಂದು ಪರಿಗಣಿಸಲ್ಪಟ್ಟಿರುವ ರಾಜ್ಯಸಭೆಯು ಪ್ರಾಂತೀಯ ಹಿತಾಸಕ್ತಿಗಳಿಗಿಂತಲೂ ರಾಷ್ಟ್ರೀಯ ಹಿತಾಸಕ್ತಿಗಳನ್ನು ಪ್ರತಿನಿಧಿಸುವ ಸದನವಾಗಿದೆ. ರಾಜ್ಯಸಭೆಯು ಹಣಕಾಸಿನ ಮಸೂದೆಗಳನ್ನು ಹೊರತುಪಡಿಸಿ ಕಾನೂನು ರಚನೆ ಹಾಗೂ ಸಂವಿಧಾನ ತಿದ್ದುಪಡಿ ವಿಷಯಗಳಲ್ಲಿ ಲೋಕಸಭೆಯಂತೆಯೇ ಅಧಿಕಾರವನ್ನು ಹೊಂದಿದೆ.

## ಲೋಕಸಭೆ:

ಭಾರತದ ಸಂವಿಧಾನದಲ್ಲಿ ಸಂಸತ್ತಿನ ಕೆಳಮನೆಯಾದ ಲೋಕಸಭೆಯು ಪ್ರಮುಖ ಸ್ಥಾನ ಮತ್ತು ಅಧಿಕಾರಗಳನ್ನು ಹೊಂದಿದೆ, ಲೋಕಸಭೆಯ ಸದಸ್ಯರು ಜನರಿಂದ ನೇರವಾಗಿ ಚುನಾವಣೆಯ ಮೂಲಕ ಆಯ್ಕೆಯಾಗುತ್ತಾರೆ, ಲೋಕಸಭೆಯು ಪ್ರಜಾಪ್ರಭುತ್ವವನ್ನು ಸಂರಕ್ಷಿಸುವ ಪರಮೋಚ್ಛ ಅಧಿಕಾರವನ್ನು ಹೊಂದಿರುತ್ತದೆ.

ವಿವಿಧ ದೇಶಗಳಲ್ಲಿ ಕೆಳಮನೆಯನ್ನು ಬೇರೆ ಬೇರೆ ಹೆಸರುಗಳಿಂದ ಕರೆಯುತ್ತಾರೆ.

| **ದೇಶಗಳು** | **ಹೆಸರು** |
|---|---|
| ಅಮೇರಿಕಾ ಸಂಯುಕ್ತ ಸಂಸ್ಥಾನ | ಹೌಸ್ ಆಪ್ ರೆಪ್ರೆಸೆಂಟಿವ್ಸ್ (ಪ್ರತಿನಿಧಿಗಳ ಸದನ) |
| ಬ್ರಿಟನ್ | ಹೌಸ್ ಆಪ್ ಕಾಮನ್ಸ್ (ಸಾಮಾನ್ಯರ ಸದನ) |
| ರಷ್ಯಾ | ಫೆಡರಲ್ ಅಸೆಂಬ್ಲಿ ಆಫ್ ರಷ್ಯಾ |
| ಕೆನಡಾ | ಹೌಸ್ ಆಪ್ ಕಾಮನ್ಸ್ (ಸಾಮಾನ್ಯರ ಸದನ) |

*ರಚನೆ:*

**ಎ) ಗಾತ್ರ:** ಲೋಕಸಭೆಯ ಒಟ್ಟು 543 ಸದಸ್ಯರು ವಿವಿಧ ರಾಜ್ಯಗಳು ಮತ್ತು ಕೇಂದ್ರಾಡಳಿತ ಪ್ರದೇಶಗಳ ಜನರಿಂದ ನೇರವಾಗಿ ಚುನಾಯಿಸುತ್ತಾರೆ, ಲೋಕಸಭೆಯಲ್ಲಿ ಪ್ರಾತಿನಿಧ್ಯವಿಲ್ಲದ ಸಂದರ್ಭದಲ್ಲಿ ಆಂಗ್ಲೋ ಇಂಡಿಯನ್ ಸಮುದಾಯಕ್ಕೆ ಸೇರಿದ ಇಬ್ಬರು ಸದಸ್ಯರನ್ನು ನಾಮಕರಣ ಮಾಡಲು ರಾಷ್ಟ್ರಪತಿಯವರಿಗೆ ಅಧಿಕಾರವಿದೆ.

**ಬಿ) ಅರ್ಹತೆಗಳು:** ಲೋಕಸಭಾ ಚುನಾವಣೆಯಲ್ಲಿ ಸ್ಪರ್ಧಿಸಲು ಈ ಕೆಳಕಂಡ ಅರ್ಹತೆಗಳನ್ನು ಹೊಂದಿರಬೇಕು.

1. ಭಾರತದ ಪ್ರಜೆಯಾಗಿರಬೇಕು.
2. 25 ವರ್ಷ ವಯಸ್ಸು ಆಗಿರಬೇಕು.
3. ಕೇಂದ್ರ ಮತ್ತು ರಾಜ್ಯ ಸರ್ಕಾರದ ಯಾವುದೇ ಲಾಭದಾಯಕ ಹುದ್ದೆಯಲ್ಲಿರಬಾರದು.
4. ಅಪರಾಧಿ ಅಥವಾ ದಿವಾಳಿ/ ಮಾನಸಿಕ ಅಸ್ವಸ್ಥರಾಗಿರಬಾರದು.
5. ಸಂಸತ್ತು ಕಾಲಕಾಲಕ್ಕೆ ನಿಗದಿಪಡಿಸುವ ಎಲ್ಲಾ ಅರ್ಹತೆಗಳನ್ನು ಹೊಂದಿರಬೇಕು.

**ಸಿ) ಅವಧಿ:** ಲೋಕಸಭೆಯ ಸದಸ್ಯರು 5 ವರ್ಷಗಳ ಅವಧಿಗೆ ಚುನಾಯಿತರಾಗುತ್ತಾರೆ, ಲೋಕಸಭೆಯ ಅವಧಿ 5 ವರ್ಷವಿದ್ದರೂ ಅವಧಿ ಮುಗಿಯುವುದಕ್ಕೆ ಮುಂಚೆ ಪ್ರಧಾನಮಂತ್ರಿಯ ಶಿಫಾರಸ್ಸಿನ ಮೇರೆಗೆ ರಾಷ್ಟ್ರಪತಿಗಳು ಲೋಕಸಭೆಯನ್ನು ವಿಸರ್ಜಿಸಬಹುದು.

**ಡಿ) ಅಧಿವೇಶನಗಳು:** ಲೋಕಸಭೆಯ ಅಧಿವೇಶನವನ್ನು ಕರೆಯುವ ಅಧಿಕಾರ ರಾಷ್ಟ್ರಪತಿಗಳಿಗಿದೆ. ವರ್ಷಕ್ಕೆ ಮೂರು ಬಾರಿ ಅಧಿವೇಶನವನ್ನು ಕರೆಯುತ್ತಾರೆ. ಎರಡು ಅಧಿವೇಶನಗಳ ನಡುವಿನ ಅಂತರ ಆರು ತಿಂಗಳು ಮೀರುವಂತಿಲ್ಲ 1/ 10 ಸಂಖ್ಯೆಯ ಸದಸ್ಯರ ಕೋರಿಕೆಯ ಮೇರೆಗೆ ರಾಷ್ಟ್ರಪತಿಗಳು ವಿಶೇಷ ಅಧಿವೇಶನವನ್ನು ಕರೆಯಬಹುದು.

**ಇ) ಕೋರಂ:** ಲೋಕಸಭೆಯ ಒಟ್ಟು ಸದಸ್ಯರಲ್ಲಿ 1/ 10 ರಷ್ಟು ಸದಸ್ಯರು ಲೋಕಸಭೆಯ ಕಾರ್ಯಕಲಾಪಗಳು ನಡೆಯುವ ಸಂದರ್ಭದಲ್ಲಿ ಹಾಜರಿರಬೇಕು, ಇಲ್ಲದಿದ್ದ ಸಂದರ್ಭದಲ್ಲಿ ಸಭಾಧ್ಯಕ್ಷರು ಕಾರ್ಯಕಲಾಪಗಳನ್ನು ಮುಂದುಡುತ್ತಾರೆ.

**ಎಫ್) ಸಭಾಧ್ಯಕ್ಷರು ಮತ್ತು ಉಪಸಭಾಧ್ಯಕ್ಷರು:** ಲೋಕಸಭಾ ಸದಸ್ಯರು ಮೊದಲ ಅಧಿವೇಶನದಲ್ಲಿ ತಮ್ಮಲ್ಲಿಯೇ ಒಬ್ಬರನ್ನು ಸಭಾಧ್ಯಕ್ಷರನ್ನಾಗಿ, ಮತ್ತೊಬ್ಬರನ್ನು ಉಪಸಭಾಧ್ಯಕ್ಷರನ್ನಾಗಿ ಆಯ್ಕೆ ಮಾಡಿಕೊಳ್ಳುತ್ತಾರೆ. ಸಭಾಧ್ಯಕ್ಷರು ಗೈರು ಹಾಜರಾದಲ್ಲಿ ಉಪಸಭಾಧ್ಯಕ್ಷರು ಅವರ ಎಲ್ಲಾ ಕಾರ್ಯಕಲಾಪಗಳನ್ನು ನಿರ್ವಹಿಸುತ್ತಾರೆ.

**ಜಿ) ವೇತನ ಮತ್ತು ಸೌಲಭ್ಯಗಳು:** ಲೋಕಸಭಾ ಸದಸ್ಯರ ವೇತನ ಮತ್ತು ಸೌಲಭ್ಯಗಳನ್ನು ಸಂಸತ್ತು ಕಾಲಕಾಲಕ್ಕೆ ನಿರ್ಧರಿಸುತ್ತದೆ, ಇವರು ಉಚಿತ ದೂರವಾಣಿ, ಪ್ರಯಾಣ ಭತ್ಯೆ, ವೇತನ, ನಿವೃತ್ತಿ ವೇತನ ಮುಂತಾದ ಸೇವಾ ಸೌಲಭ್ಯಗಳನ್ನು ಪಡೆಯುತ್ತಾರೆ. ಸದನದಲ್ಲಿನ ಸದಸ್ಯರ ಭಾಷಣ, ಚರ್ಚೆ, ಮಾತು ಹಾಗೂ ವರ್ತನೆಗಳನ್ನು ನ್ಯಾಯಾಲಯದಲ್ಲಿ ಪ್ರಶ್ನಿಸುವಂತಿಲ್ಲ.

**ಎಚ್) ಲೋಕಸಭೆಯ ವಿಸರ್ಜನೆ:** ಲೋಕಸಭೆಯನ್ನು ಪ್ರಧಾನಮಂತ್ರಿಯ ಶಿಫಾರಸಿನ ಮೇರೆಗೆ ರಾಷ್ಟ್ರಪತಿಯವರು ವಿಸರ್ಜಿಸಬಹುದು. ವಿಸರ್ಜನೆಯಾದ ಆರು ತಿಂಗಳ ಒಳಗಾಗಿ ಲೋಕಸಭೆಗೆ ಚುನಾವಣೆ ನಡೆಸಬೇಕು.

## ಹಂಗಾಮಿ ಸಭಾಧ್ಯಕ್ಷರು (Protem Speaker)

ಸಾರ್ವತ್ರಿಕ ಚುನಾವಣೆಗಳ ನಂತರ ಲೋಕಸಭೆಯನ್ನು ಮೊದಲಬಾರಿಗೆ ಅಧಿವೇಶನ ನಡೆದಾಗ ರಾಷ್ಟ್ರಾಧ್ಯಕ್ಷರು ಸಾಮಾನ್ಯವಾಗಿ ಲೋಕಸಭೆಯಲ್ಲಿ ಚುನಾಯಿತರಾದ ಅತ್ಯಂತ ಹಿರಿಯ ವ್ಯಕ್ತಿಯನ್ನು ಲೋಕಸಭೆಯ ಹಂಗಾಮಿ ಅಧ್ಯಕ್ಷನನ್ನಾಗಿ ನೇಮಕ ಮಾಡುತ್ತಾರೆ. ಹೊಸದಾಗಿ ಚುನಾಯಿತರಾದ ಸದಸ್ಯರಿಗೆ ಪ್ರಮಾಣ ವಚನವನ್ನು ಬೋಧಿಸುತ್ತಾರೆ.

## ಲೋಕಸಭೆಯ ಸಭಾಪತಿ:

"ಸಭಾಪತಿಯು ಸದನದ ಗೌರವವನ್ನು ಮತ್ತು ಸ್ವಾತಂತ್ರ್ಯವನ್ನು ಪ್ರತಿನಿಧಿಸುತ್ತಾರೆ. ಲೋಕಸಭೆಯು ದೇಶವನ್ನು ಪ್ರತಿನಿಧಿಸುವುದರಿಂದ ಒಂದು ರೀತಿಯಲ್ಲಿ ಸಭಾಪತಿ ರಾಷ್ಟ್ರದ ಸ್ವಾತಂತ್ರ್ಯ ಮತ್ತು ಗೌರವಗಳ ಸಂಕೇತವಾಗಿದ್ದಾರೆ. ಆದುದ್ದರಿಂದಲೇ ಅದು ಒಂದು ಗೌರವಾನ್ವಿತ ಸ್ಥಾನವಾಗಿರುವುದು"

**ಪ್ರಧಾನಮಂತ್ರಿ ಜವಾಹರಲಾಲ್ ನೆಹರು**

ಲೋಕಸಭೆಯ ಸಭಾಪತಿ ಲೋಕಸಭೆಯ ಮುಖ್ಯಸ್ಥರಾಗಿದ್ದಾರೆ. ಆದ್ದರಿಂದ ಈ ಹುದ್ದೆಯು ಮಹತ್ವದಾಗಿದೆ.

## ಸಭಾಪತಿ ಮತ್ತು ಉಪಸಭಾಪತಿಯ ಆಯ್ಕೆ:

ಸಾರ್ವತ್ರಿಕ ಚುನಾವಣೆಗಳು ಮುಗಿದ ಬಳಿಕ ಸಾಧ್ಯವಾದಷ್ಟು ಬೇಗನೆ ಸದಸ್ಯರುಗಳಲ್ಲಿಯೇ ಒಬ್ಬರನ್ನು ಸಭಾಪತಿಯಾಗಿ ಮತ್ತೆ ಮತ್ತೊಬ್ಬರನ್ನು ಉಪಸಭಾಪತಿಗಳಾಗಿ ಆಯ್ಕೆ ಮಾಡಬೇಕು. ಸಭಾಪತಿ ಚುನಾವಣಾ ದಿನಾಂಕವನ್ನು ರಾಷ್ಟ್ರಾಧ್ಯಕ್ಷರು ನಿಗದಿಪಡಿಸುತ್ತಾರೆ. ಸಭಾಪತಿಯಾದ ಮೇಲೆ ಅವರು ಪಕ್ಷಾತೀತರಾಗಿ ಕಾರ್ಯ ನಿರ್ವಹಿಸುತ್ತಾರೆ.

## ಅಧಿಕಾರಾವಧಿ:

1. ಲೋಕಸಭೆ ಸದಸ್ಯನಾಗಿರುವ ಅವಧಿ ಮುಗಿದು ಹೋದ ನಂತರ ತಮ್ಮ ಹುದ್ದೆಯನ್ನು ಖಾಲಿ ಮಾಡಬೇಕಾಗುತ್ತದೆ.
2. ಸಭಾಪತಿಗಳು ಉಪಸಭಾಪತಿಗಳಿಗೆ, ಉಪಸಭಾಪತಿಗಳು ಸಭಾಪತಿಗಳಿಗೆ ರಾಜೀನಾಮೆ ನೀಡಬಹುದಾಗಿದೆ.
3. ಲೋಕಸಭೆಯ ಹಾಜರಿರುವ ಸದಸ್ಯರ ಬಹುಮತದಿಂದ ಅಂಗೀಕೃತವಾದ ನಿರ್ಣಯದ ಮೇರೆಗೆ ಇವರನ್ನು ಸ್ಥಾನದಿಂದ ತೆಗೆದುಹಾಕಬಹುದಾಗಿದೆ.

*ಸಭಾಪತಿಯ ಅಧಿಕಾರ ಮತ್ತು ಕಾರ್ಯಗಳು:*

1. ಲೋಕಸಭೆಯ ಅಧ್ಯಕ್ಷತೆಯನ್ನು ವಹಿಸಿ ಸದನದ ವ್ಯವಹಾರಗಳನ್ನು ಕ್ರಮಬದ್ಧವಾಗಿ ನಡೆಸುತ್ತಾರೆ ಮತ್ತು ಸದನದ ಕಲಾಪಗಳನ್ನು ನಿಯಂತ್ರಿಸುತ್ತಾರೆ.
2. ಸಮಾನ ಮತಗಳು ಬಂದ ಸಂದರ್ಭದಲ್ಲಿ ನಿರ್ಣಾಯಕ ಮತವನ್ನು ಚಲಾಯಿಸುತ್ತಾರೆ.
3. ಲೋಕಸಭೆಯಲ್ಲಿ ನಿರ್ದಿಷ್ಟ ಕೋರಂ ಇಲ್ಲದಿದ್ದರೆ ಸಭೆಯನ್ನು ಮುಂದೂಡುತ್ತಾರೆ.
4. ಸದನದಲ್ಲಿ ಚರ್ಚಿಸಬೇಕಾದ ವಿಷಯಗಳನ್ನು ನಿರ್ಧರಿಸುತ್ತಾರೆ.
5. ಜಂಟಿ ಅಧಿವೇಶನದ ಅಧ್ಯಕ್ಷತೆಯನ್ನು ವಹಿಸುತ್ತಾರೆ.
6. ಯಾವುದಾದರೂ ಮಸೂದೆ ಹಣಕಾಸು ಮಸೂದೆಯೇ ಅಥವಾ ಅಲ್ಲವೇ ಎಂಬುದನ್ನು ತೀರ್ಮಾನಿಸುತ್ತಾರೆ.
7. ಇವರು ನಿಯಮಾವಳಿ ಸಮಿತಿ (ರೂಲ್ಸ್ ಕಮಿಟಿ) ಮತ್ತು ವ್ಯವಹಾರ ಸಲಹಾ ಸಮಿತಿಗಳ ಅಧ್ಯಕ್ಷರಾಗಿರುತ್ತಾರೆ.
8. ಸಚಿವಾಲಯದ ಮೇಲ್ವಿಚಾರಣೆಯನ್ನು ನಡೆಸುತ್ತಾರೆ.
9. ಅಸಂಬದ್ಧ ಚರ್ಚೆಗಳನ್ನು ನಿಯಂತ್ರಿಸುವ ಅಧಿಕಾರವನ್ನು ಹೊಂದಿರುತ್ತಾರೆ.
10. ಸದನದ ಸದಸ್ಯರ ಹಕ್ಕು ಬಾಧ್ಯತೆಗಳನ್ನು ಸಂರಕ್ಷಿಸುತ್ತಾರೆ.

ಸಂಸದೀಯ ಮಾದರಿ ಸರ್ಕಾರ ಪದ್ಧತಿಯಲ್ಲಿ ಕಾರ್ಯಾಂಗವು ಶಾಸಕಾಂಗಕ್ಕೆ ಜವಾಬ್ದಾರಿಯುತವಾಗಿರಬೇಕಾಗುತ್ತದೆ, ಕಾರ್ಯಾಂಗವು ಶಾಸಕಾಂಗದ ಸೃಷ್ಟಿಯಾಗಿರುವುದರಿಂದ ಈ ಕೆಳಕಂಡ ವಿಧಾನಗಳ ಮೂಲಕ ಕಾರ್ಯಾಂಗವನ್ನು ನಿಯಂತ್ರಿಸುತ್ತದೆ.

## ಸರ್ಕಾರದ ಮೇಲೆ ಶಾಸಕಾಂಗದ ನಿಯಂತ್ರಣಗಳು:

### 1. ಪ್ರಶ್ನಾವೇಳೆ (Question Hour)

ಅಧಿವೇಶನ ನಡೆಯುವ ಸಂದರ್ಭದಲ್ಲಿ ಪ್ರತಿದಿನ 11 ಗಂಟೆಯಿಂದ ಶೂನ್ಯ ವೇಳೆಯ ಪ್ರಾರಂಭದ ಅವಧಿಯೊಳಗಿನ ಸಮಯವೇ ಪ್ರಶ್ನಾವೇಳೆ. ಈ ವೇಳೆಯಲ್ಲಿ ಕೇಳುವ ಪ್ರಶ್ನೆಗಳನ್ನು ಕೇಳುವ ಪ್ರಶ್ನೆಗಳನ್ನು ಸದಸ್ಯರು ಸಂಬಂಧಪಟ್ಟವರಿಗೆ 10 ದಿನಗಳ ಮುಂಚೆ ತಲುಪಿಸಿರಬೇಕು.

**2. ಶೂನ್ಯವೇಳೆ (Zero Hour)**

ಮಧ್ಯಾಹ್ನ 12 ಗಂಟೆಯಿಂದ ಊಟದ ಸಮಯದವರೆಗಿನ ನಡುವಿನ ಅವಧಿಯೇ ಶೂನ್ಯವೇಳೆ. ಈ ಅವಧಿಯಲ್ಲಿ ಸದಸ್ಯರು ಸಚಿವರಿಗೆ ಪ್ರಶ್ನೆಗಳನ್ನು ಕೇಳಬಹುದು.

**3. ಗಮನ ಸೆಳೆಯುವ ಸೂಚನೆ (Calling Attention Motion)**

ಸಾರ್ವಜನಿಕ ಮಹತ್ವ ಪಡೆದಿರುವ ವಿಷಯಗಳು/ ವಿವಾದಗಳು ಘಟನೆಗಳತ್ತ ಸರ್ಕಾರದ ಗಮನ ಸೆಳೆದು ಚರ್ಚೆಯಾಗುವಂತೆ ಆಗ್ರಹಿಸುವ ನಿರ್ಣಯವೇ ಗಮನ ಸೆಳೆಯುವ ಸೂಚನೆ.

**4. ನಿಲುವಳಿ ಸೂಚನೆ (Adjournment Motion)**

ಅಧಿವೇಶನದ ಸಂದರ್ಭದಲ್ಲಿ ದೇಶದ ಯಾವ ಭಾಗದಲ್ಲಾದರು ಅನಾಹುತ ಅಥವಾ ಗಲಭೆ ಉಂಟಾದ ವೇಳೆಯಲ್ಲಿ ವಿರೋಧ ಪಕ್ಷದ ಸದಸ್ಯರುಗಳು ಈಗಾಗಲೇ ಸದನದ ನಿಗಧಿತ ಕಾರ್ಯಸೂಚಿಯಲ್ಲಿ ವಿಷಯಗಳ ಕುರಿತಾದ ಚರ್ಚೆಯನ್ನು ಸ್ಥಗಿತಗೊಳಿಸಿ ಸಾರ್ವಜನಿಕ ವಿಷಯದ ಚರ್ಚೆಯನ್ನು ಕೈಗೆತ್ತಿಕೊಳ್ಳುವಂತೆ ಆಗ್ರಹ ಪಡಿಸುವ ಸೂಚನೆಯೇ ನಿಲುವಳಿ ಸೂಚನೆ.

**5. ಹಕ್ಕು ಚ್ಯುತಿ ಮಂಡನಾ ನಿರ್ಣಯ (Breach Privilege Motion)**

ಸಭಾಪತಿಯ ಒಪ್ಪಿಗೆ ಮೇರೆಗೆ ಸಾರ್ವಜನಿಕ ಮಹತ್ವವುಳ್ಳ ಮತ್ತು ತುರ್ತಾದ ವಿಷಯಗಳ ಕುರಿತು ಶಾಸನಸಭಾ ಸದಸ್ಯರುಗಳು ತಮ್ಮ ಹಕ್ಕುಗಳಿಗೆ ಚ್ಯುತಿ ಉಂಟಾದಾಗ ಅವುಗಳ ರಕ್ಷಣೆಗಾಗಿ ಆಗ್ರಹಪಡಿಸಿ ಸದನದಲ್ಲಿ ಮಂಡಿಸುವ ನಿರ್ಣಯವೇ ಹಕ್ಕುಚ್ಯುತಿ ಮಂಡನಾ ನಿರ್ಣಯ.

**6. ಕಡಿತ ನಿರ್ಣಯ (Token Cut Motion)**

ಸರ್ಕಾರದ ಮುಂಗಡ ಪತ್ರವನ್ನು ಟೀಕಿಸುವುದಕ್ಕಾಗಿ ಸದಸ್ಯರು ಸಾಂಕೇತಿಕವಾಗಿ ಕನಿಷ್ಠ ಒಂದು ರೂಪಾಯಿಯನ್ನು ಕಡಿತಗೊಳಿಸಲು ಆಗ್ರಹಪಡಿಸಿ ಮಂಡಿಸುವ ನಿರ್ಣಯವೇ ಕಡಿತ ನಿರ್ಣಯ.

**7. ಸದನದ ಬಾವಿ (Well of the House)**

ಗಂಭೀರ ವಿಷಯಗಳಿಗೆ ಸಂಬಂಧಿಸಿದಂತೆ ವಿರೋಧ ಪಕ್ಷದ ಸದಸ್ಯರು ಸ್ಪೀಕರ್ ಮುಂದಿನ ಸ್ಥಳಕ್ಕೆ ಧಾವಿಸಿ ಧರಣಿ ಕೈಗೊಳ್ಳುವ ಸ್ಥಳವೇ ಸದನದ ಬಾವಿ.

**8. ಅವಿಶ್ವಾಸ ನಿರ್ಣಯ (No confidence Motion)**

ಮಂತ್ರಿಮಂಡಲವು ಸಮರ್ಪಕವಾಗಿ ಆಡಳಿತ ನಡೆಸದೆ ಇದ್ದಾಗ ಇದರ ವಿರುದ್ಧ ಅವಿಶ್ವಾಸವನ್ನು ವ್ಯಕ್ತಪಡಿಸಿ ಸದನದಲ್ಲಿ ಮಂಡಿಸುವ ನಿರ್ಣಯವೇ ಅವಿಶ್ವಾಸ ನಿರ್ಣಯ.

ಅವಿಶ್ವಾಸ ನಿರ್ಣಯವು ಬಹುಮತದೊಂದಿಗೆ ಸ್ವೀಕೃತಗೊಂಡರೆ ಮಂತ್ರಿಮಂಡಲವು ರಾಜೀನಾಮೆ ನೀಡಬೇಕಾಗುತ್ತದೆ. ಏಕೆಂದರೆ ಅದು ಸದನದ ವಿಶ್ವಾಸವನ್ನು ಕಳೆದುಕೊಂಡಿರುವುದನ್ನು ಸೂಚಿಸುತ್ತದೆ.

ಈ ಮೇಲ್ಕಂಡ ನಿಯಂತ್ರಣಗಳನ್ನು ಸಮರ್ಪಕವಾಗಿ ಪ್ರಯೋಗಿಸಿದರೆ ಆಡಳಿತ ಪಕ್ಷ ರುಜುಮಾರ್ಗದಲ್ಲಿ ನಡೆಯುತ್ತದೆ. ಈ ನಿಯಂತ್ರಣಗಳ ಅಸಮರ್ಪಕ ಬಳಕೆಯಿಂದ ಸಂಸದೀಯ ಪ್ರಜಾಪ್ರಭುತ್ವ ಅವನತಿ ಹಾದಿ ಹಿಡಿಯುತ್ತದೆ.

## ಅಭ್ಯಾಸ

### I. ಒಂದು ವಾಕ್ಯದಲ್ಲಿ ಉತ್ತರಿಸಿ.

1. ಅಮೇರಿಕಾ ಸಂಯುಕ್ತ ಸಂಸ್ಥಾನದಲ್ಲಿ ಮೇಲ್ಮನೆಯನ್ನು ಯಾವ ಹೆಸರಿನಿಂದ ಕರೆಯುತ್ತಾರೆ?
2. ರಾಷ್ಟ್ರಾಧ್ಯಕ್ಷರು ರಾಜ್ಯಸಭೆಗೆ ಎಷ್ಟು ಸದಸ್ಯರನ್ನು ನಾಮಕರಣ ಮಾಡುತ್ತಾರೆ?
3. ರಾಜ್ಯಸಭೆಯ ಕೋರಂ ಎಷ್ಟಿದೆ?
4. ರಾಜ್ಯಸಭೆಯ ಸದಸ್ಯರ ಅಧಿಕಾರವಧಿ ಎಷ್ಟು?
5. ಲೋಕಸಭೆಯ ಪ್ರಸ್ತುತ ಸದಸ್ಯರ ಸಂಖ್ಯೆ ಎಷ್ಟು?

### II. ‘ಅ’ ಪಟ್ಟಿಗೆ ‘ಬ’ ಪಟ್ಟಿಯನ್ನು ಹೊಂದಿಸಿ ಬರೆಯಿರಿ.

| ಅ | ಬ |
|---|---|
| ಎ. ಬ್ರಿಟನ್ | 1. ಕಾಂಗ್ರೆಸ್ |
| ಬಿ. ಜಪಾನ್ | 2. ತ್ಸೆಂಗ್ಡು |
| ಸಿ. ನೇಪಾಳ | 3. ಪಾರ್ಲಿಮೆಂಟ್ |
| ಡಿ. ಪಾಕಿಸ್ತಾನ | 4. ಡಯಟ್ |
| ಇ. ಭೂತಾನ | 5. ರಾಷ್ಟ್ರೀಯ ಪಂಚಾಯತ್ |

### III. ಎರಡು ಅಥವಾ ಮೂರು ವಾಕ್ಯಗಳಲ್ಲಿ ಉತ್ತರಿಸಿ.

1. ಸಂಸತ್ತಿನ ಎರಡು ಸದನಗಳಾವುವು?
2. ರಾಷ್ಟ್ರಾಧ್ಯಕ್ಷರು ರಾಜ್ಯಸಭೆಗೆ ಯಾವ ಕ್ಷೇತ್ರದಲ್ಲಿ ವಿಶಿಷ್ಟ ಸಾಧನೆ ಮಾಡಿದವರನ್ನು ನಾಮಕರಣ ಮಾಡುತ್ತಾರೆ?
3. ರಾಜ್ಯಸಭೆಯಲ್ಲಿ ನಡೆಸಲಾಗುವ ಒಟ್ಟು ಅಧಿವೇಶನಗಳೆಷ್ಟು?

4. ಲೋಕಸಭೆಯಲ್ಲಿ ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ಪಂಗಡಗಳ ಮೀಸಲಾತಿ ಸ್ಥಾನಗಳೆಷ್ಟು?
5. ಹಂಗಾಮಿ ಸಭಾಧ್ಯಕ್ಷ ಎಂದರೇನು?

**IV. ನಾಲ್ಕು ಅಥವಾ ಐದು ವಾಕ್ಯಗಳಲ್ಲಿ ಉತ್ತರಿಸಿ.**

1. ಲೋಕಸಭೆಯ ಸದಸ್ಯರಾಗಲು ಇರುವ ಅರ್ಹತೆಗಳೇನು?
2. ಲೋಕಸಭೆಯ ಸಂವಿಧಾನಾತ್ಮಕ ಅಧಿಕಾರ ಮತ್ತು ಕಾರ್ಯಗಳನ್ನು ತಿಳಿಸಿ.
3. ಲೋಕಸಭೆಯ ಕಾರ್ಯಾಂಗೀಯ ಅಧಿಕಾರಗಳನ್ನು ತಿಳಿಸಿ.
4. ಲೋಕಸಭೆಯ ಗಾತ್ರವನ್ನು ತಿಳಿಸಿರಿ.

**V. ಎಂಟು ಆಥವಾ ಹತ್ತು ವಾಕ್ಯಗಳಲ್ಲಿ ಉತ್ತರಿಸಿ.**

1. ಲೋಕಸಭೆಯ ಅಧಿಕಾರ ಮತ್ತು ಕಾರ್ಯಗಳನ್ನು ತಿಳಿಸಿರಿ.
2. ರಾಜ್ಯಸಭೆಯನ್ನು ಹಿರಿಯರ ಸದನವೆಂದು ಕರೆಯುತ್ತಾರೆ. ಸಮರ್ಥಿಸಿ.
3. ಲೋಕಸಭೆಯ ಸಭಾಪತಿಯ ಕಾರ್ಯಗಳನ್ನು ವಿವರಿಸಿ.

**ಸಲಹಾತ್ಮಕ ಚಟುವಟಿಕೆಗಳು:**

1. ಲೋಕಸಭೆ ಮತ್ತು ರಾಜ್ಯಸಭೆಗಳಿಗೆ ಸಂಬಂಧಿಸಿದ ಮಾಹಿತಿಗಳನ್ನು ತುಲಾನಾತ್ಮಕ ಪಟ್ಟಿಯಲ್ಲಿ ನಿರೂಪಿಸಿ.
2. ಶಾಲೆಯಲ್ಲಿ ಅಣಕು ಸಂಸತ್ತನ್ನು (Mock parliament) ರಚಿಸಿ, ಅಧಿವೇಶನಗಳನ್ನು ಏರ್ಪಡಿಸಿ ಶಾಲಾ ವಿಷಯಗಳ ಬಗ್ಗೆ ಚರ್ಚಿಸಿ.

# ಅಧ್ಯಾಯ- 7 ಸರ್ವೋಚ್ಚ ನ್ಯಾಯಾಲಯ (SUPREME COURT)

## ಕಲಿಕೆಯ ಉದ್ದೇಶಗಳು:

1. ಭಾರತದ ನ್ಯಾಯಾಂಗದ ಮಹತ್ವದ ಬಗ್ಗೆ ತಿಳಿಯುವುದು.
2. ಸುಪ್ರೀಂಕೋರ್ಟಿನ ನ್ಯಾಯಾಧೀಶರ ನೇಮಕ ಮತ್ತು ಅಧಿಕಾರವಧಿಯ ಬಗ್ಗೆ ತಿಳಿಯುವುದು.
3. ಸುಪ್ರೀಂಕೋರ್ಟಿನ ಅಧಿಕಾರ ಮತ್ತು ಕಾರ್ಯದ ಬಗ್ಗೆ ತಿಳುವಳಿಕೆ ಮೂಡಿಸುವುದು.
4. ಸಾರ್ವಜನಿಕ ಹಿತಾಸಕ್ತಿ ಮೊಕದ್ದಮೆ ಕುರಿತು ಅರಿವು ಮೂಡಿಸುವುದು.
5. ನ್ಯಾಯಾಂಗದ ಕ್ರಿಯಾಶೀಲತೆಯ ಬಗ್ಗೆ ಅರಿವು ಮೂಡಿಸುವುದು.

"ನ್ಯಾಯಾಂಗ ರಾಜ್ಯದ ಇತರ ಅಂಗಗಳಿಗಿಂತ ಉನ್ನತ ಸ್ಥಾನದಲ್ಲಿರುವ ಕಾವಲುಗೋಪುರ. ಇದು ರಾಜ್ಯದ ಇತರ ಅಂಗಗಳು ಕಾನೂನಿಗನುಸಾರವಾಗಿ ಮತ್ತು ಸಂವಿಧಾನಕ್ಕೆ ಅನುಗುಣವಾಗಿ ಕಾರ್ಯ ನಿರ್ವಹಿಸುತ್ತವೆಯೇ ಎಂದು ಗಮನಿಸುತ್ತದೆ".

## ನ್ಯಾಯಮೂರ್ತಿ ಆಂಟ್ವಾಲಿಯಾ

ಸರ್ವೋಚ್ಚ ನ್ಯಾಯಾಲಯವು ಅತ್ಯುನ್ನತ ನ್ಯಾಯಾಲಯವಾಗಿರುತ್ತದೆ. ಈ ನ್ಯಾಯಾಲಯವನ್ನು 1950 ಜನವರಿ 28 ರಂದು ಸ್ಥಾಪಿಸಲಾಯಿತು. ಇದರ ಕೇಂದ್ರ ಕಛೇರಿಯು ನವದೆಹಲಿಯಲ್ಲಿದೆ. ಸಂವಿಧಾನದ ಐದನೇ ಭಾಗದಲ್ಲಿ 124 ರಿಂದ 147 ರ ವರೆಗಿನ ವಿಧಿಗಳಲ್ಲಿ ಸರ್ವೋಚ್ಚ ನ್ಯಾಯಾಲಯದ ಕುರಿತು ವಿವರಿಸಲಾಗಿದೆ.

ರಚನೆ:

*ಎ) ಗಾತ್ರ:*

ವಿಧಿ 124 ರ ಅನ್ವಯ ಭಾರತದ ಸಂವಿಧಾನವು ಭಾರತಕ್ಕೆ ಒಂದು ಸರ್ವೋಚ್ಚ ನ್ಯಾಯಾಲಯವಿರಬೇಕೆಂದು ತಿಳಿಸುತ್ತದೆ.

ಪ್ರಸ್ತುತ ಸರ್ವೋಚ್ಚ ನ್ಯಾಯಲಯ ಒಬ್ಬ ಮುಖ್ಯ ನ್ಯಾಯಧೀಶರು ಹಾಗು ೩೦ ಜನ ನ್ಯಾಯಾಧೀಶರುಗಳನ್ನು ಒಳಗೊಂಡಿರುತ್ತದೆ. ಸಂಸತ್ತು ಸರ್ವೋಚ್ಚ ನ್ಯಾಯಾಲಯದ ನ್ಯಾಯಧೀಶರ ಸಂಖ್ಯೆಯನ್ನು ಹೆಚ್ಚಿಸುವ ಅಧಿಕಾರ ಹೊಂದಿರುತ್ತದೆ.

*ಬಿ) ನ್ಯಾಯಾಧೀಶರ ನೇಮಕ ಮತ್ತು ಅಧಿಕಾರಾವಧಿ:*

ಸರ್ವೋಚ್ಚ ನ್ಯಾಯಾಲಯದ ನ್ಯಾಯಧೀಶರನ್ನು ರಾಷ್ಟ್ರಪತಿಗಳು ನೇಮಕ ಮಾಡುತ್ತಾರೆ. ರಾಷ್ಟ್ರಪತಿಗಳು ನ್ಯಾಯಾಧೀಶರಲ್ಲಿಯೇ ಹೆಚ್ಚು ಸೇವಾ ಜೇಷ್ಠತೆ ಹೊಂದಿದವರನ್ನು ಮುಖ್ಯ ನ್ಯಾಯಾಧೀಶರನ್ನಾಗಿ ನೇಮಕ ಮಾಡುತ್ತಾರೆ. ಇವರು 65 ನೇ

ವಯಸ್ಸನ್ನು ಹೊಂದುವವರೆಗೆ ಅಧಿಕಾರದಲ್ಲಿರುತ್ತಾರೆ. ನ್ಯಾಯಾಧೀಶರು ಯಾವುದೇ ಸಂದರ್ಭದಲ್ಲಿ ರಾಷ್ಟ್ರಪತಿಗಳಿಗೆ ರಾಜಿನಾಮೆ ನೀಡಬಹುದಾಗಿದೆ.

*ಸಿ) ನ್ಯಾಯಾಧೀಶರ ಅರ್ಹತೆಗಳು:*

ಸರ್ವೋಚ್ಚ ನ್ಯಾಯಾಲಯದ ನ್ಯಾಯಾಧೀಶರಾಗಲು ಈ ಕೆಳಗಿನ ಅರ್ಹತೆಗಳನ್ನು ಹೊಂದಿರಬೇಕು.

1. ಭಾರತದ ಪ್ರಜೆಯಾಗಿರಬೇಕು.
2. ಕನಿಷ್ಠ 5 ವರ್ಷಗಳ ಕಾಲ ನಿರಂತರವಾಗಿ ಯಾವುದೇ ಉಚ್ಚ ನ್ಯಾಯಾಲಯದಲ್ಲಿ ನ್ಯಾಯಧೀಶರಾಗಿ ಸೇವೆ ಸಲ್ಲಿಸಿರಬೇಕು.
3. ಕನಿಷ್ಠ 10 ವರ್ಷಗಳ ಕಾಲ ನಿರಂತರವಾಗಿ ಯಾವುದೇ ಉಚ್ಚ ನ್ಯಾಯಾಲಯದಲ್ಲಿ ವಕೀಲರಾಗಿ ಸೇವೆಯಲ್ಲಿರಬೇಕು.
4. ರಾಷ್ಟ್ರಪತಿಯ ದೃಷ್ಠಿಯಲ್ಲಿ ಖ್ಯಾತ ಕಾನೂನು ತಜ್ಞರೆಂದು ಪರಿಗಣಿಸಲ್ಪಟ್ಟಿರಬೇಕು.

*ಡಿ) ನ್ಯಾಯಾಧೀಶರ ಪ್ರಮಾಣವಚನ:*

ಇವರು ರಾಷ್ಟ್ರಪತಿಗಳಿಂದ ಪ್ರಮಾಣವಚನ ಸ್ವೀಕರಿಸುತ್ತಾರೆ.

*ಇ) ನ್ಯಾಯಾಧೀಶರ ವೇತನ ಮತ್ತು ಭತ್ಯೆ:*

ಸರ್ವೋಚ್ಚ ನ್ಯಾಯಾಲಯದ ನ್ಯಾಯಾಧೀಶರ ವೇತನವನ್ನು ಸಂಸತ್ತು ಕಾನೂನಿನ ಮೂಲಕ ನಿರ್ಧರಿಸುತ್ತದೆ. ನ್ಯಾಯಾಧೀಶರ ವೇತನವನ್ನು ಕೇಂದ್ರ ಸಂಚಿತ ನಿಧಿಯಿಂದ ನೀಡಲಾಗುತ್ತದೆ. ಪ್ರಸ್ತುತ ಮುಖ್ಯ ನ್ಯಾಯಾಧೀಶರ ಮಾಸಿಕ ವೇತನ 1 ಲಕ್ಷ ರೂಗಳು ಮತ್ತು ಇತರ ನ್ಯಾಯಾಧೀಶರ ಮಾಸಿಕ ವೇತನ 90,000 ರೂಗಳು. ರಾಷ್ಟ್ರಪತಿಗಳಿಗಿರುವ ಎಲ್ಲಾ ಸವಲತ್ತುಗಳನ್ನು ಇವರು ಹೊಂದಿರುತ್ತಾರೆ.

*ಎಫ್) ವಿನಾಯಿತಿಗಳು:*

1. ನ್ಯಾಯಾಧೀಶರು ನೀಡುವ ತೀರ್ಪುಗಳನ್ನು ಪೂರ್ವಾಗ್ರಹಪೀಡಿತರಾಗಿ ಟೀಕಿಸುವಂತಿಲ್ಲ.
2. ಹಣಕಾಸಿನ ತುರ್ತುಪರಿಸ್ಥಿತಿ ಹೊರತುಪಡಿಸಿ ಯಾವುದೇ ಸಂದರ್ಭದಲ್ಲಿ ನ್ಯಾಯಾಧೀಶರ ವೇತನವನ್ನು ಕಡಿತಗೊಳಿಸುವಂತಿಲ್ಲ.
3. ನ್ಯಾಯಾಧೀಶರು ಉಚಿತ ನಿವಾಸ, ಸಾರಿಗೆ, ವಿದ್ಯುತ್ ಮುಂತಾದ ಸೌಲಭ್ಯಗಳನ್ನು ಪಡೆಯುತ್ತಾರೆ.

## ಸರ್ವೋಚ್ಚ ನ್ಯಾಯಾಲಯದ ಅಧಿಕಾರಿಗಳು:

*1) ಮೂಲ ಅಧಿಕಾರ ವ್ಯಾಪ್ತಿ (Original Jurisdiction):*

ನೇರವಾಗಿ ಹೂಡಲಾದ ಮೊಕದ್ದಮೆಗಳನ್ನು ಇತ್ಯರ್ಥಪಡಿಸುವ ಸರ್ವೋಚ್ಚ ನ್ಯಾಯಾಲಯದ ಅಧಿಕಾರವೇ ಮೂಲ ಅಧಿಕಾರ ವ್ಯಾಪಿ ಇದರ ವ್ಯಾಪ್ತಿಯಲ್ಲಿ ಒಳಗೊಳ್ಳುವ

ಅಂಶಗಳು.

a. ಮೂಲಭೂತ ಹಕ್ಕುಗಳ ಉಲ್ಲಂಘನೆ.
b. ರಾಷ್ಟ್ರಪತಿ ಮತ್ತು ಉಪರಾಷ್ಟ್ರಪತಿಗಳ ಚುನಾವಣಾ ವಿವಾದಗಳು.
c. ಕೇಂದ್ರ ಹಾಗು ರಾಜ್ಯ ಸರ್ಕಾರಗಳು ಅಥವಾ ಅಂತರರಾಜ್ಯಗಳ ಮಧ್ಯದಲ್ಲಿ ಉಂಟಾಗುವ ವಿವಾದಗಳು.

*2) ಅಪೀಲು ಅಧಿಕಾರ ವ್ಯಾಪ್ತಿ:*

ಭಾರತದ ಯಾವುದೇ ಉಚ್ಚ ನ್ಯಾಯಾಲಯವು ನಾಗರೀಕ, ಅಪರಾಧ, ಸಂವಿಧಾನಿಕ ಪ್ರಕರಣಗಳಲ್ಲಿ ಉಚ್ಚ ನ್ಯಾಯಾಲಯದ ತೀರ್ಪುಗಳನ್ನು ಪ್ರಶ್ನಿಸಿ ಹೂಡಲಾದ ಮೊಕದ್ದಮೆಗಳನ್ನು ಇತ್ಯರ್ಥಪಡಿಸುವ ಸರ್ವೋಚ್ಚ ನ್ಯಾಯಾಲಯದ ಅಧಿಕಾರವೇ ಅಪೀಲು ಅಧಿಕಾರವಾಗಿರುತ್ತದೆ.

ಎ) ನಾಗರೀಕ ಪ್ರಕರಣಗಳಲ್ಲಿ ಉಚ್ಚ ನ್ಯಾಯಾಲಯದ ಅನುಮತಿಯೊಂದಿಗೆ ಸರ್ವೋಚ್ಚ ನ್ಯಾಯಾಲಯದಲ್ಲಿ ಮೇಲ್ಮನವಿ ಸಲ್ಲಿಸಬಹುದು.
ಬಿ) ಅಪರಾಧ ಮತ್ತು ಸಂವಿಧಾನಾತ್ಮಕ ಪ್ರಕರಣಗಳಲ್ಲಿ ಉಚ್ಚ ನ್ಯಾಯಾಲಯದ ಅನುಮತಿಯೊಂದಿಗೆ ಅಥವಾ ಅನುಮತಿರಹಿತವಾಗಿ ಸರ್ವೋಚ್ಚ ನ್ಯಾಯಾಲಯದಲ್ಲಿ ಮೇಲ್ಮನವಿ ಮಾಡಿಕೊಳ್ಳಬಹುದಾಗಿದೆ.

*3) ಸಲಹಾತ್ಮಕ ಅಧಿಕಾರ ವ್ಯಾಪ್ತಿ:*

ಕಾನೂನಾತ್ಮಕ ಬಿಕ್ಕಟ್ಟು ಉಂಟಾದಾಗ ಸರ್ವೋಚ್ಚ ನ್ಯಾಯಾಲಯದ ಮುಖ್ಯನ್ಯಾಯಾಧೀಶರು ರಾಷ್ಟ್ರಪತಿಗೆ ನೀಡುವ ಸಲಹೆಗಳೇ ಸಲಹಾತ್ಮಕ ಅಧಿಕಾರಗಳಾಗಿರುತ್ತವೆ.

*4) ದಾಖಲೆಗಳ ನ್ಯಾಯಾಲಯ:*

ಎಲ್ಲಾ ನ್ಯಾಯಿಕ ವ್ಯವಹಾರಗಳನ್ನು ದಸ್ತಾವೇಜಿನಲ್ಲಿ ದಾಖಲು ಮಾಡುವ ಮತ್ತು ನ್ಯಾಯ ನಿಂದನೆಗೆ ದಂಡಿಸುವ ಅಧಿಕಾರವನ್ನು ಹೊಂದಿರುವುದೇ ದಾಖಲೆಗಳ ನ್ಯಾಯಾಲಯವಾಗಿರುತ್ತದೆ. ಸರ್ವೋಚ್ಚ ನ್ಯಾಯಾಲಯವು ದಾಖಲೆಗಳ ನ್ಯಾಯಾಲಯವಾಗಿ ಈ ಕೆಳಗಿನ ಅಧಿಕಾರವನ್ನು ಹೊಂದಿರುತ್ತದೆ.

ಎ) ತನ್ನ ಅಧಿಕಾರ ವ್ಯಾಪ್ತಿಯನ್ನು ನಿರ್ಣಯಿಸುವ ಅಧಿಕಾರ.
ಬಿ) ತನ್ನ ನಿಂದನೆಗೆ ದಂಡಿಸುವ ಅಧಿಕಾರ.
ಸಿ) ಉಚ್ಚ ನ್ಯಾಯಾಲಯ ಮತ್ತು ಅಧೀನ ನ್ಯಾಯಾಲಯಗಳಿಗಾದ ನಿಂದನೆಗೆ ದಂಡಿಸುವ ಅಧಿಕಾರಗಳನ್ನು ಹೊಂದಿರುತ್ತದೆ.

*5) ವಿಶೇಷ ಅನುಮತಿ ಅರ್ಜಿ (Speacial leave petition):*

ಭಾರತದ ರಾಜ್ಯಕ್ಷೇತ್ರದಲ್ಲಿರುವ ಯಾವುದೇ ನ್ಯಾಯಾಲಯ ಅಥವಾ ನ್ಯಾಯಾಧೀಕರಣ ಯಾವುದೇ ವ್ಯಾಜ್ಯ ಅಥವಾ ವಿಷಯದಲ್ಲಿ ಕೊಟ್ಟ ತೀರ್ಪು. ಡಿಕ್ರಿ,

ನಿರ್ಧರಣೆ ಆದೇಶಗಳ ವಿರುದ್ಧ ಅಪೀಲು ಹೂಡಲು ಸರ್ವೋಚ್ಚ ನ್ಯಾಯಾಲಯವು ತನ್ನ ವಿವೇಚನಾನುಸಾರ ಅನುಮತಿಯನ್ನು ನೀಡಬಹುದಾಗಿದೆ.

*6) ನ್ಯಾಯಿಕ ವಿಮರ್ಶೆ ಅಧಿಕಾರ (Judicial Review):*

ಎ) ಸರ್ವೋಚ್ಚ ನ್ಯಾಯಾಲಯವು ಶಾಸಕಾಂಗದಿಂದ ರೂಪಿಸಲ್ಪಟ್ಟ ಕಾನೂನುಗಳು ಸಂವಿಧಾನದ ನಿಯಮಗಳಿಗೆ ಅನುಗುಣವಾಗಿವೆಯೇ ಅಥವಾ ಇಲ್ಲವೆ ಎಂಬುದನ್ನು ವಿಮರ್ಶಿಸುತ್ತದೆ. ಒಂದು ವೇಳೆ ಈ ಕಾನೂನುಗಳು ಸಂವಿಧಾನದ ನಿಯಮಗಳನ್ನು ಉಲ್ಲಂಘಿಸುವಂತಿದ್ದರೆ, ಅವುಗಳನ್ನು 'ಅಸಿಂಧು' ಅಥವಾ 'ಸಂವಿಧಾನ ಬಾಹಿರ' ಎಂದು ಘೋಷಿಸುತ್ತದೆ. ಈ ಅಧಿಕಾರವನ್ನು ನ್ಯಾಯಿಕ ವಿಮರ್ಶಾಧಿಕಾರ ಎಂದು ಕರೆಯಲಾಗುತ್ತದೆ.

ಬಿ) ಸರ್ವೋಚ್ಚ ನ್ಯಾಯಾಲಯವು ಕಾರ್ಯಾಂಗದ ನಿರ್ಧಾರಗಳು ಮತ್ತು ಆಜ್ಞೆಗಳು ಸಂವಿಧಾನದ ನಿಯಮಗಳಿಗೆ ಅನುಗುಣವಾಗಿವೆಯೇ ಅಥವಾ ಇಲ್ಲವೆ ಎಂಬುದನ್ನು ವಿಮರ್ಶಿಸುತ್ತದೆ. ಒಂದು ವೇಳೆ ಇವುಗಳು ಸಂವಿಧಾನದ ನಿಯಮಗಳನ್ನು ಉಲ್ಲಂಘಿಸುವಂತಿದ್ದರೆ ಅವುಗಳನ್ನು 'ಅಸಿಂಧು' ಅಥವಾ 'ಸಂವಿಧಾನ ಬಾಹಿರ' ಎಂದು ಘೋಷಿಸುತ್ತದೆ.

*7) ಮೂಲಭೂತ ಹಕ್ಕುಗಳ ರಕ್ಷಣೆ:*

ವಿಧಿ 32 ಪ್ರಜಾಸಾತ್ವಂತ್ರ್ಯದ ಅವಶ್ಯಕತೆಯಾಗಿದೆ, ಇದು ಸಂವಿಧಾನಾತ್ಮಕ ಪರಿಹಾರದ ಹಕ್ಕಾಗಿರುವುದರಿಂದ ನ್ಯಾಯಾಂಗವು ಹಕ್ಕುಗಳ ರಕ್ಷಣೆಗೆ ಮಹತ್ವ ನೀಡುತ್ತದೆ. ಆದುದರಿಂದ ಡಾ. ಬಿ. ಆರ್. ಅಂಬೇಡ್ಕರ್‌ರವರು ಈ ವಿಧಿಯನ್ನು "ಸಂವಿಧಾನದ ಆತ್ಮ ಮತ್ತು ಹೃದಯ" ಎಂದು ಕರೆದಿದ್ದಾರೆ. ಸರ್ವೋಚ್ಚ ನ್ಯಾಯಾಲಯವು ಮೂಲಭೂತ ಹಕ್ಕುಗಳ ಉಲ್ಲಂಘನೆಯಾದಾಗ 5 ಬಗೆಯ ಆಜ್ಞೆ(ರಿಟ್)ಗಳನ್ನು ಹೊರಡಿಸುವ ಅಧಿಕಾರ ಹೊಂದಿದೆ. ಅಂತಹ ಆಜ್ಞೆಗಳೆಂದರೆ ;

ಎ) ಬಂಧಿ ಪ್ರತ್ಯಕ್ಷೀಕರಣ ಆಜ್ಞೆ
ಬಿ) ಪರಮಾದೇಶ
ಸಿ) ಪ್ರತಿಬಂಧಕಾಜ್ಞೆ
ಡಿ) ಉತ್ಪ್ರೇಕ್ಷಣಾ ಲೇಖ
ಇ) ಅಧಿಕಾರ ಲೇಖ

## ಸಂವಿಧಾನದ ರಕ್ಷಣೆ:

ಸರ್ವೋಚ್ಚ ನ್ಯಾಯಾಲಯವು ಸಂವಿಧಾನದ ರಕ್ಷಕನಂತೆ ಕಾರ್ಯ ನಿರ್ವಹಿಸುತ್ತದೆ. ಶಾಸಕಾಂಗ ರಚಿಸುವ ಶಾಸನಗಳು ಮತ್ತು ಕಾರ್ಯಾಂಗ ನೀಡುವ ಆಜ್ಞೆಗಳನ್ನು ಸಂವಿಧಾನ ಬಾಹಿರವಾಗಿವೆ ಎಂದು ಕಂಡು ಬಂದಾಗ ಅವುಗಳನ್ನು 'ಅಸಿಂಧು' ಎಂದು ಘೋಷಿಸುವ ಮೂಲಕ ಸಂವಿಧಾನದ ರಕ್ಷಣಾಕಾರ್ಯವನ್ನು ನಿರ್ವಹಿಸುತ್ತದೆ.

## ಸಾರ್ವಜನಿಕ ಹಿತಾಸಕ್ತಿ ಮೊಕದ್ದಮೆ (Public Interest litigation):

ಸಾರ್ವಜನಿಕ ಹಿತಾಸಕ್ತಿಗೆ ಸಂಬಂಧಿಸಿದ ವಿಷಯಗಳ ಮೇಲೆ ಒಬ್ಬ ವ್ಯಕ್ತಿ, ಸಂಘಟನೆ ಅಥವಾ ಸಂಸ್ಥೆ ನ್ಯಾಯಾಲಯದಲ್ಲಿ ಮೊಕದ್ದಮೆಯನ್ನು ದಾಖಲು ಮಾಡುವುದೇ "ಸಾರ್ವಜನಿಕ ಹಿತಾಸಕ್ತಿ ಮೊಕದ್ದಮೆ" ಉದಾಹರಣೆಗೆ ಭಯೋತ್ಪಾದನೆ, ವಾಯುಮಾಲಿನ್ಯ, ರಸ್ತೆ ಸಂರಕ್ಷಣೆ, ಪರಿಸರ ರಕ್ಷಣೆ ಮುಂತಾದ ವಿಷಯಗಳಲ್ಲಿ ಜನರ ಹಿತರಕ್ಷಣೆಗಾಗಿ ಮೊಕದ್ದಮೆ ಹೂಡಬಹುದು.

ಮಾಜಿ ನ್ಯಾಯಾಮೂರ್ತಿ ಶ್ರೀ. ವಿ. ಎಸ್. ಕೃಷ್ಣ ಅಯ್ಯರ್ ಹಾಗೂ ಶ್ರೀ. ಪಿ. ಎಮ್. ಭಗವತಿ ನೀಡಿರುವ ಮಹತ್ವಪೂರ್ಣ ತೀರ್ಪುಗಳು ಸಾರ್ವಜನಿಕ ಹಿತಾಸಕ್ತಿ ಮೊಕದ್ದಮೆಯ ತಳಹದಿಯನ್ನು ವಿಶಾಲಗೊಳಿಸಿವೆ.

ಸಂವಿಧಾನದ 32 ನೇ ವಿಧಿಯನ್ವಯ ಸಾರ್ವಜನಿಕ ಹಿತಾಸಕ್ತಿ ಮೊಕದ್ದಮೆ ಸರ್ವೋಚ್ಚ ನ್ಯಾಯಾಲಯದ ಅಧಿಕಾರ ವ್ಯಾಪ್ತಿಯ ವಿಸ್ತರಣೆಯಾಗಿದೆ. ಇದನ್ನು ಸಾಮಾಜಿಕ ಪರಿವರ್ತನೆಯ ನ್ಯಾಯಿಕ ಸಾಧನವೆಂದು ಪರಿಗಣಿಸಲಾಗಿದೆ.

### ಸರ್ವೋಚ್ಚ ನ್ಯಾಯಾಲಯದ ಕ್ರಿಯಾಶೀಲತೆ (Sypreme court's activism):

ದೇಶದ ಅತ್ಯುನ್ನತ ನ್ಯಾಯಾಲಯವಾದ ಸರ್ವೋಚ್ಚ ನ್ಯಾಯಾಲಯವು, ಇತ್ತೀಚಿನ ವರ್ಷಗಳಲ್ಲಿ ಕಾನೂನಿನ ಆಡಳಿತವನ್ನು ಎತ್ತಿ ಹಿಡಿಯಲು ವಿವಿದ ಮೊಕದ್ದಮೆಗಳಿಗೆ ಸಂಬಂಧಿಸಿದಂತೆ ಮಹತ್ತರ ತೀರ್ಪುಗಳನ್ನು ನೀಡುತ್ತಿದೆ. ಇಂತಹ ಅನೇಕ ಪ್ರಮುಖ ವಿಷಯಗಳ ಬಗ್ಗೆ ಸಾರ್ವಜನಿಕ ಹಿತಾಸಕ್ತಿ ಅರ್ಜಿಗಳನ್ನು ಸ್ವೀಕರಿಸಿ ದಾರಿ ತಪ್ಪಿದ ಸರ್ಕಾರಗಳನ್ನು ಎಚ್ಚರಿಸುತ್ತ ಬಂದಿದೆ. ಇದನ್ನೇ ನ್ಯಾಯಾಂಗೀಯ ಕ್ರಿಯಾಶೀಲತೆ ಎಂದು ಕರೆಯಲಾಗಿದೆ.

ಉದಾಹರಣೆ- ಕರ್ನಾಟಕದ ಐ. ಎ. ಎಸ್. ಅಧಿಕಾರಿ ವಾಸುದೇವನ್ ಅವರ ಕರ್ತವ್ಯಲೋಪಕ್ಕೆ 1995 ರ ನವೆಂಬರ್ ನಲ್ಲಿ ಒಂದು ತಿಂಗಳು ಸಾಮಾನ್ಯ ಜೈಲು ವಿಧಿಸಿ, ಸರ್ಕಾರದ ಉನ್ನತ ಅಧಿಕಾರಿಗಳು ಕಾನೂನಿಗಿಂತ ಶ್ರೇಷ್ಠರಲ್ಲ ಎಂದು ಎಚ್ಚರಿಕೆ ನೀಡಿತು. 1996 ರಲ್ಲಿ ಹವಾಲ ಹಗರಣದ ತನಿಖೆಯ ವ್ಯಾಪ್ತಿಯನ್ನು ವಿಸ್ತೃತಗೊಳಿಸಿ ಆರೋಪ ಎದುರಿಸುತ್ತಿರುವ ವ್ಯಕ್ತಿಗಳ ಹುದ್ದೆ, ಸ್ಥಾನಮಾನಗಳು ಪರಿಗಣಿಸದೆ ಪ್ರತಿಯೊಬ್ಬರ ವಿರುದ್ಧ ತ್ವರಿತವಾಗಿ ತನಿಖೆ ನಡೆಸುವಂತೆ ಸರ್ವೋಚ್ಚ ನ್ಯಾಯಾಲಯ ಸಿ. ಬಿ. ಐ. ಗೆ ನಿರ್ದೇಶನ ನೀಡಿತು.

ಒಟ್ಟಿನಲ್ಲಿ ಭಾರತದ ಏಕೀಕೃತ ನ್ಯಾಯಾಂಗದ ಅಡಿಯಲ್ಲಿ ಅತ್ಯುನ್ನತ ಸ್ಥಾನದಲ್ಲಿರುವ ಸರ್ವೋಚ್ಚ ನ್ಯಾಯಾಂಗವು ಪ್ರಜೆಗಳ ಸ್ವಾತಂತ್ರ್ಯ ಮತ್ತು ಸಂವಿಧಾನದ ಶ್ರೇಷ್ಠತೆಯನ್ನು ಎತ್ತಿ ಹಿಡಿಯುತ್ತಾ ಬಂದಿದೆ, ಬೃಹತ್ ಗಾತ್ರದ ಪ್ರಜಾಪ್ರಭುತ್ವದ ಸಕಾಲಿಕ ಸಬಲೀಕರಣಕ್ಕೆ ನೆರವಾಗಿದೆ.

### ಅಭ್ಯಾಸ

**I. ಒಂದು ವಾಕ್ಯದಲ್ಲಿ ಉತ್ತರಿಸಿ.**

1. ಸರ್ವೋಚ್ಚ ನ್ಯಾಯಾಲಯ ಯಾವಾಗ ಸ್ಥಾಪನೆಯಾಯಿತು?

2. ಸರ್ವೋಚ್ಚ ನ್ಯಾಯಾಲಯದ ನ್ಯಾಯಧೀಶರನ್ನು ಯಾರು ನೇಮಕ ಮಾಡುತ್ತಾರೆ?
3. ಪ್ರಸ್ತುತ ಸರ್ವೋಚ್ಚ ನ್ಯಾಯಾಲಯದ ಮುಖ್ಯ ನ್ಯಾಯಾಧೀಶರು ಯಾರು?
4. ನ್ಯಾಯಾಧೀಶರಿಗೆ ಪ್ರಮಾಣವಚನವನ್ನು ಯಾರು ಭೋಧಿಸುತ್ತಾರೆ?
5. ಸಂವಿಧಾನದ ರಕ್ಷಕ ಯಾರು?

**II. ಬಿಟ್ಟ ಸ್ಥಳದಲ್ಲಿ ಸೂಕ್ತ ಪದವನ್ನು ತುಂಬಿರಿ.**

1. ಪ್ರಸ್ತುತ ಸರ್ವೋಚ್ಚ ನ್ಯಾಯಾಲಯದ ಒಟ್ಟು ಸದಸ್ಯರ ಸಂಖ್ಯೆ________.
2. ಮುಖ್ಯ ನ್ಯಾಯಾಧೀಶರನ್ನು ನೇಮಕ ಮಾಡುವವರು ________.
3. ನ್ಯಾಯಾಧೀಶರು ________ ವಯಸ್ಸನ್ನು ಹೊಂದುವವರೆಗೆ ಅಧಿಕಾರದಲ್ಲಿರುತ್ತಾರೆ.
4. ಮೂಲಭೂತ ಹಕ್ಕುಗಳ ರಕ್ಷಕ ________.

**III. ಎರಡು ಅಥವಾ ಮೂರು ವಾಕ್ಯಗಳಲ್ಲಿ ಉತ್ತರಿಸಿ.**

1. ಮೂಲ ಅಧಿಕಾರ ವ್ಯಾಪ್ತಿ ಎಂದರೇನು?
2. ದಾಖಲೆಗಳ ನ್ಯಾಯಾಲಯ ಎಂದರೇನು?
3. ಮೂಲ ಅಧಿಕಾರ ವ್ಯಾಪ್ತಿಯಲ್ಲಿ ಒಳಗೊಳ್ಳುವ ಅಂಶಗಳಾವುವು?
4. ನ್ಯಾಯಿಕ ವಿಮರ್ಶೆ ಅಧಿಕಾರ ಎಂದರೇನು?
5. ಸರ್ವೋಚ್ಚ ನ್ಯಾಯಾಲಯದ ಕಾರ್ಯಶೀಲತೆ ಎಂದರೇನು?

**IV. ನಾಲ್ಕು ಅಥವಾ ಐದು ವಾಕ್ಯಗಳಲ್ಲಿ ಉತ್ತರಿಸಿ.**

1. ಸರ್ವೋಚ್ಚ ನ್ಯಾಯಾಲಯದ ನ್ಯಾಯಾಧೀಶರಾಗಲು ಇರುವ ಅರ್ಹತೆಗಳಾವುವು?
2. ಸರ್ವೋಚ್ಚ ನ್ಯಾಯಾಲಯ ನೀಡುವ ಆಜ್ಞೆಗಳು ಯಾವುವು?
3. ಸಲಹಾತ್ಮಕ ಅಧಿಕಾರ ವ್ಯಾಪ್ತಿಯ ಕುರಿತು ತಿಳಿಸಿರಿ.

**V. ಎಂಟು ಅಥವಾ ಹತ್ತು ವಾಕ್ಯಗಳಲ್ಲಿ ಉತ್ತರಿಸಿ.**

1. ಸರ್ವೋಚ್ಚ ನ್ಯಾಯಾಲಯದ ಅಧಿಕಾರ ಮತ್ತು ಕಾರ್ಯಗಳಾವುವು?
2. ಸಾರ್ವಜನಿಕ ಹಿತಾಸಕ್ತಿ ಮೊಕದ್ದಮೆ ಅಗತ್ಯತೆಯನ್ನು ತಿಳಿಸಿರಿ.
3. ಸರ್ವೋಚ್ಚ ನ್ಯಾಯಾಲಯದ ಕಾರ್ಯಶೀಲತೆಯನ್ನು ವಿವರಿಸಿ.

**ಸಲಹಾತ್ಮಕ ಚಟುವಟಿಕೆಗಳು:**

1. ಸಂವಿಧಾನದ ಸಂರಕ್ಷಣೆಯಲ್ಲಿ ಸರ್ವೋಚ್ಚ ನ್ಯಾಯಾಲಯದ ಪಾತ್ರವನ್ನು ವಿವರಿಸುವುದು.
2. ಭಾರತದಲ್ಲಿ ನ್ಯಾಯಾಂಗೀಯ ಸ್ವಾತಂತ್ರದ ಬಗ್ಗೆ ಮಾಹಿತಿ ಸಂಗ್ರಹಿಸುವುದು.

# ಅಧ್ಯಾಯ- 8 ರಾಜ್ಯ ಕಾರ್ಯಾಂಗ (STATE EXECUTIVE)

## ಕಲಿಕೆಯ ಉದ್ದೇಶಗಳು:

1. ಕೇಂದ್ರ ಕಾರ್ಯಾಂಗವನ್ನು ರಾಜ್ಯಕಾರ್ಯಾಂಗದೊಂದಿಗೆ ತುಲನೆ ಮಾಡುವುದು.
2. ರಾಜ್ಯಪಾಲರ ನೇಮಕ, ಅಧಿಕಾರ ಮತ್ತು ಸ್ಥಾನಮಾನಗಳ ಬಗ್ಗೆ ಅರಿವು ಮೂಡಿಸುವುದು.
3. ಮುಖ್ಯಮಂತ್ರಿಯ ನೇಮಕ, ಅಧಿಕಾರ ಮತ್ತು ಕಾರ್ಯಗಳ ಬಗ್ಗೆ ತಿಳುವಳಿಕೆ ಮೂಡಿಸುವುದು.
4. ರಾಜ್ಯ ಮಂತ್ರಿಮಂಡಲದ ರಚನೆ, ಅಧಿಕಾರ ಮತ್ತು ಕಾರ್ಯಗಳ ಬಗ್ಗೆ ತಿಳುವಳಿಕೆ ಮೂಡಿಸುವುದು.

ಭಾರತದ ಸಂವಿಧಾನವು ಸಾಮಾನ್ಯವಾದ ಸಂದರ್ಭದಲ್ಲಿ ಸಂಯುಕ್ತ ವ್ಯವಸ್ಥೆಯನ್ನು ಹೊಂದಿರುತ್ತದೆ. ಹಾಗಾಗಿ ಕೇಂದ್ರ ಮಟ್ಟದಲ್ಲಿ ಕೇಂದ್ರ ಸರಕಾರವು ಕಾರ್ಯನಿರ್ವಹಿಸುವಂತೆ ರಾಜ್ಯಮಟ್ಟದಲ್ಲಿ ರಾಜ್ಯ ಸರಕಾರ ಕಾರ್ಯನಿರ್ವಹಿಸುತ್ತದೆ. ಸಂವಿಧಾನದ 6 ನೇ ಭಾಗದಲ್ಲಿರುವ 152 ರಿಂದ 237 ರ ವರಗಿನ ವಿಧಿಗಳು ರಾಜ್ಯ ಸರಕಾರದ ಕುರಿತು ತಿಳಿಸುತ್ತವೆ. ರಾಜ್ಯ ಸರಕಾರವು, ರಾಜ್ಯ ಕಾರ್ಯಾಂಗ ಶಾಸಕಾಂಗ, ನ್ಯಾಯಾಂಗಗಳನ್ನು ಒಳಗೊಂಡಿರುತ್ತದೆ.

## ರಾಜ್ಯ ಸರಕಾರ

1. ಕಾರ್ಯಾಂಗ
   a. ರಾಜ್ಯಪಾಲರು
   b. ಮುಖ್ಯಮಂತ್ರಿ ನೇತೃತ್ವದ ಮಂತ್ರಿಮಂಡಲ
2. ಶಾಸಕಾಂಗ
   a. ವಿಧಾನಸಭೆ
   b. ವಿಧಾನಪರಿಷತ್ತು
3. ನ್ಯಾಯಾಂಗ
   a. ಉಚ್ಚನ್ಯಾಯಾಲಯ

### *ರಾಜ್ಯಪಾಲರು:*

ರಾಜ್ಯಪಾಲರು ರಾಜ್ಯಕಾರ್ಯಾಂಗದ ಸಂವಿಧಾನಾತ್ಮಕ ಮುಖ್ಯಸ್ಥರಾಗಿರುತ್ತಾರೆ. ಭಾರತದ ರಾಷ್ಟ್ರಪತಿಯವರಂತೆ ರಾಜ್ಯಪಾಲರು ರಾಜ್ಯ ಕಾರ್ಯಾಂಗದ ನಾಮಮಾತ್ರ ಮುಖ್ಯಸ್ಥರಾಗಿರುತ್ತಾರೆ. ಮುಖ್ಯಮಂತ್ರಿ ನೇತೃತ್ವದ ಮಂತ್ರಿಮಂಡಲದ ಸಹಾಯ ಮತ್ತು ಸಲಹೆ ಮೇರೆಗೆ ಕಾರ್ಯ ನಿರ್ವಹಿಸುತ್ತಾರೆ.

ಸಂವಿಧಾನದ 153 ನೇ ವಿಧಿ ಅನ್ವಯ ಪ್ರತಿಯೊಂದು ರಾಜ್ಯವು ಒಬ್ಬ ರಾಜ್ಯಪಾಲರನ್ನು ಹೊಂದಿರಬೇಕು. ಸಂವಿಧಾನ ತಿದ್ದುಪಡಿ ಅಧಿ ನಿಯಮ 1956 ರನ್ವಯ ಎರಡು ಅಥವಾ ಹೆಚ್ಚು ರಾಜ್ಯಗಳು ಕೂಡಿ ಒಬ್ಬ ರಾಜ್ಯಪಾಲರನ್ನು ಹೊಂದುವುದಕ್ಕೂ ಅವಕಾಶವನ್ನು ನೀಡಲಾಗಿದೆ.

## 1) ರಾಜ್ಯಪಾಲರ ನೇಮಕ:

ರಾಷ್ಟ್ರಪತಿಗಳು ರಾಜ್ಯಪಾಲರನ್ನು ನೇಮಕ ಮಾಡುತ್ತಾರೆ. ಸಾಮಾನ್ಯವಾಗಿ ರಾಷ್ಟ್ರಪತಿಗಳು ಕೇಂದ್ರದ ಮಂತ್ರಿಮಂಡಲವು ಶಿಫಾರಸ್ಸು ಮಾಡಿದವರನ್ನು ನೇಮಕ ಮಾಡುತ್ತಾರೆ. ರಾಜ್ಯಪಾಲರನ್ನು ನೇಮಕ ಮಾಡುವಾಗ ರಾಷ್ಟ್ರಪತಿಗಳು ಆಯಾ ರಾಜ್ಯಗಳ ಜೊತೆ ಸಮಾಲೋಚನೆ ಮಾಡುವುದು ಸಂಪ್ರದಾಯವಾಗಿದೆ.

## 2) ರಾಜ್ಯಪಾಲರ ಅಧಿಕಾರಾವಧಿ:

ರಾಜ್ಯಪಾಲರು ರಾಷ್ಟ್ರಪತಿಗಳು ಇಚ್ಛಿಸುವವರೆಗೆ ಅಧಿಕಾರದಲ್ಲಿರುತ್ತಾರೆ. ಅವರ ಅಧಿಕಾರಾವಧಿ 5 ವರ್ಷಗಳು. ರಾಜ್ಯಪಾಲರು ಅವಧಿಗೂ ಮುನ್ನ ರಾಷ್ಟ್ರಪತಿಗಳಿಗೆ ರಾಜೀನಾಮೆ ನೀಡಬಹುದಾಗಿದೆ.

## 3) ರಾಜ್ಯಪಾಲರ ಅರ್ಹತೆಗಳು:

ರಾಜ್ಯಪಾಲರಾಗಿ ನೇಮಕವಾಗುವ ವ್ಯಕ್ತಿಯ ಈ ಕೆಳಕಂಡ ಅರ್ಹತೆಗಳನ್ನು ಹೊಂದಿರಬೇಕು.

1. ಭಾರತದ ಪ್ರಜೆಯಾಗಿರಬೇಕು.
2. ಕನಿಷ್ಟ 35 ವರ್ಷ ವಯಸ್ಸನ್ನು ಹೊಂದಿರಬೇಕು.
3. ಕೇಂದ್ರ ಅಥವಾ ರಾಜ್ಯ ಶಾಸಕಾಂಗದ ಸದಸ್ಯರಾಗಿರಬಾರದು.
4. ಯಾವುದೇ ಲಾಭದಾಯಕ ಹುದ್ದೆಯಲ್ಲಿರಬಾರದು.

## 4) ರಾಜ್ಯಪಾಲರ ವೇತನ ಮತ್ತು ಭತ್ಯೆ:

ರಾಜ್ಯಪಾಲರು ಸಂಸತ್ತು ಕಾನೂನಿನ ಮೂಲಕ ನಿರ್ಧರಿಸಬಹುದಾದಷ್ಟು ವೇತನ ಮತ್ತು ಭತ್ಯೆಗಳನ್ನು ಪಡೆಯುತ್ತಾರೆ. ರಾಜ್ಯಪಾಲರ ವೇತನವನ್ನು ರಾಜ್ಯಸಂಚಿತನಿಧಿಯಿಂದ ನೀಡಲಾಗುತ್ತದೆ. ರಾಜ್ಯಪಾಲರ ಪ್ರಸ್ತುತ ಮಾಸಿಕ ವೇತನ 1,10,000 ಆಗಿರುತ್ತದೆ.

## 5) ರಾಜ್ಯಪಾಲರ ಪ್ರಮಾಣವಚನ:

ರಾಜ್ಯಪಾಲರು ತಾವು ಅಧಿಕಾರವನ್ನು ಸ್ವೀಕರಿಸುವುದಕ್ಕಿಂತಲೂ ಮುಂಚಿತವಾಗಿ, ರಾಜ್ಯದ ಉಚ್ಛನ್ಯಾಯಾಲಯದ ಮುಖ್ಯ ನ್ಯಾಯಾಧೀಶರಿಂದ ಅಥವಾ ಅವರ ಅನುಪಸ್ಥಿತಿಯಲ್ಲಿ ನ್ಯಾಯಾಲಯದ ಹಿರಿಯ ನ್ಯಾಯಾಧೀಶರಿಂದ ಪ್ರಮಾಣವಚನವನ್ನು ಸ್ವೀಕರಿಸುತ್ತಾರೆ.

## ಅಧಿಕಾರ ಮತ್ತು ಕಾರ್ಯಗಳು:

ಕೇಂದ್ರದಲ್ಲಿ ರಾಷ್ಟ್ರಪತಿಗಳು ರಾಷ್ಟ್ರದ ಮುಖ್ಯಸ್ಥರಾಗಿರುವಂತೆ ರಾಜ್ಯಪಾಲರು ರಾಜ್ಯದ ಮುಖ್ಯಸ್ಥರಾಗಿರುತ್ತಾರೆ. ಸರ್ಕಾರದ ಎಲ್ಲಾ ಕಾರ್ಯಗಳು ಅವರ ಹೆಸರಿನಲ್ಲಿಯೇ ನಡೆಯುತ್ತವೆ. ಇವರು ರಾಜ್ಯದ ನಾಮಮಾತ್ರ ಮುಖ್ಯಸ್ಥರಾಗಿದ್ದರೂ ಕೆಲವು ವಿವೇಚನಾ ಅಧಿಕಾರಗಳನ್ನು ಹೊಂದಿರುತ್ತಾರೆ. ಅವರ ಕಾರ್ಯಗಳು ಇಂತಿವೆ.

### 1) ಕಾರ್ಯಾಂಗೀಯ ಅಧಿಕಾರಗಳು:

1. ಮುಖ್ಯಮಂತ್ರಿ ಮತ್ತು ಮಂತ್ರಿಮಂಡಲವನ್ನು ನೇಮಕ ಮಾಡುತ್ತಾರೆ.
2. ರಾಜ್ಯದ ಅಡ್ವೋಕೇಟ್ ಜನರಲ್‌ರನ್ನು ನೇಮಕ ಮಾಡುತ್ತಾರೆ.
3. ರಾಜ್ಯ ಚುನಾವಣಾ ಆಯುಕ್ತರನ್ನು ನೇಮಕ ಮಾಡಿ, ಅವರ ಸೇವಾ ಷರತ್ತುಗಳನ್ನು ನಿರ್ಧರಿಸುತ್ತಾರೆ.
4. ರಾಜ್ಯ ಲೋಕಸೇವಾ ಆಯೋಗದ ಅಧ್ಯಕ್ಷರು ಮತ್ತು ಸದಸ್ಯರನ್ನು ನೇಮಕ ಮಾಡುತ್ತಾರೆ.
5. ರಾಜ್ಯದ ಸಮಗ್ರ ಆಡಳಿತಕ್ಕೆ ಸಂಬಂಧಿಸಿದ ಮಾಹಿತಿಗಳನ್ನು ರಾಜ್ಯಪಾಲರು ಮುಖ್ಯಮಂತ್ರಿಯವರಿಂದ ಪಡೆಯುತ್ತಾರೆ.
6. ರಾಜ್ಯದಲ್ಲಿ ಸಂವಿಧಾನಾತ್ಮಕ ಬಿಕ್ಕಟ್ಟು ಉಂಟಾದಾಗ ರಾಜ್ಯ ತುರ್ತುಪರಿಸ್ಥಿತಿ ಘೋಷಿಸುವಂತೆ ರಾಷ್ಟ್ರಪತಿಯವರಿಗೆ ಶಿಫಾರಸ್ಸು ಮಾಡುತ್ತಾರೆ.

### 2) ಶಾಸನೀಯ ಅಧಿಕಾರಗಳು:

ಶಾಸನಗಳನ್ನು ಮಾಡುವ ಹಾಗೂ ಶಾಸನ ಸಭೆಗಳಾದ ವಿಧಾನಸಭೆ ಮತ್ತು ಪರಿಷತ್ತಿಗೆ ಸಂಬಂಧಿಸಿದ ಅಧಿಕಾರಗಳನ್ನು ಇದು ಒಳಗೊಳ್ಳುತ್ತದೆ.

1. ರಾಜ್ಯಪಾಲರು ವಿಧಾನಮಂಡಲದ ಅಧಿವೇಶನವನ್ನು ಕರೆಯುವ ಅಥವಾ ಮುಕ್ತಾಯಗೊಳಿಸುವ ಅಥವಾ ವಿಧಾನ ಸಭೆಯನ್ನು ವಿಸರ್ಜಿಸುವ ಅಧಿಕಾರವನ್ನು ಹೊಂದಿರುತ್ತಾರೆ.
2. ಉಭಯ ಸದನಗಳ ಜಂಟಿ ಅಧಿವೇಶನ ಕರೆಯುವ ಮತ್ತು ಅದನ್ನು ಉದ್ದೇಶಿಸಿ ಭಾಷಣ ಮಾಡುವ ಅಧಿಕಾರ ಇವರಿಗಿದೆ.

3. ಸಾಹಿತ್ಯ, ಕಲೆ, ವಿಜ್ಞಾನ, ಸಮಾಜಸೇವೆ ಮತ್ತು ಸಹಕಾರ ಚಳುವಳಿ ಕ್ಷೇತ್ರಗಳಲ್ಲಿ ವಿಶಿಷ್ಟ ಸಾಧನೆ ಅಥವಾ ಪ್ರಾಯೋಗಿಕ ಅನುಭವ ಹೊಂದಿರುವ ವ್ಯಕ್ತಿಗಳನ್ನು ವಿಧಾನ ಪರಿಷತ್ತಿಗೆ 1/ 6 ರಷ್ಟು ಸದಸ್ಯರನ್ನು ನಾಮನಿರ್ದೇಶನ ಮಾಡುತ್ತಾರೆ.
4. ಚುನಾವಣಾ ಆಯೋಗದ ಸಲಹೆಯ ಮೇರೆಗೆ ರಾಜ್ಯಪಾಲರು ರಾಜ್ಯ ವಿಧಾನಮಂಡಲದ ಸದಸ್ಯರನ್ನು ಅನರ್ಹಗೊಳಿಸುವ ಅಧಿಕಾರವನ್ನು ಹೊಂದಿರುತ್ತಾರೆ.
5. ರಾಜ್ಯ ವಿಧಾನ ಮಂಡಲ ಅಧಿವೇಶನದಲ್ಲಿ ಇಲ್ಲದಿದ್ದಾಗ ರಾಜ್ಯಪಾಲರು ಸುಗ್ರೀವಾಜ್ಞೆಗಳನ್ನು ಹೊರಡಿಸುವ ಅಧಿಕಾರವನ್ನು ಹೊಂದಿರುತ್ತಾರೆ.
6. ರಾಜ್ಯ ಹಣಕಾಸು ಆಯೋಗದ ವರದಿ, ರಾಜ್ಯ ಲೆಕ್ಕಗಳಿಗೆ ಸಂಬಂಧಿಸಿದ ಮಹಾಲೆಕ್ಕ ಪರಿಶೋಧಕರ ವರದಿಗಳನ್ನು ರಾಜ್ಯಪಾಲರು ರಾಜ್ಯ ವಿಧಾನಮಂಡಲದಲ್ಲಿ ಮಂಡಿಸುವಂತೆ ನೋಡಿಕೊಳ್ಳುತ್ತಾರೆ.

**3) ಹಣಕಾಸಿನ ಅಧಿಕಾರಗಳು:**

ಹಣಕಾಸು ವ್ಯವಹಾರಕ್ಕೆ ಸಂಬಂಧಿಸಿದ ಅಧಿಕಾರಗಳನ್ನು ಇದು ಒಳಗೊಂಡಿದೆ.

1. ರಾಜ್ಯದ ಸಾದಿಲ್ವಾರು ನಿಧಿಯಿಂದ ಪ್ರಾಕೃತಿಕ ವಿಕೋಪದಂತಹ ತುರ್ತು ಸಂದರ್ಭಗಳಲ್ಲಿ ಹಣವನ್ನು ಪಡೆಯುವ ಅಧಿಕಾರ ಹೊಂದಿರುತ್ತಾರೆ.
2. ಪ್ರತಿ ಐದು ವರ್ಷಗಳಿಗೊಮ್ಮೆ ರಾಜ್ಯ ಹಣಕಾಸು ಆಯೋಗವನ್ನು ನೇಮಕ ಮಾಡುವ ಅಧಿಕಾರವನ್ನು ಹೊಂದಿರುತ್ತಾರೆ.
3. ಹಣಕಾಸು ಮಸೂದೆಯನ್ನು ರಾಜ್ಯ ವಿಧಾನಮಂಡಲದಲ್ಲಿ ಮಂಡಿಸುವ ಮೊದಲು ರಾಜ್ಯಪಾಲರ ಪೂರ್ವಾನುಮತಿಯನ್ನು ಪಡೆಯಬೇಕು.

**4) ನ್ಯಾಯಿಕ ಅಧಿಕಾರಗಳು:**

ರಾಜ್ಯಪಾಲರು ರಾಜ್ಯದಲ್ಲಿ ನಿರ್ವಹಿಸುವ ನ್ಯಾಯಿಕ ಅಧಿಕಾರಗಳೆಂದರೆ,

1. ನ್ಯಾಯಾಲಯದಿಂದ ಶಿಕ್ಷೆಗೊಳಗಾದ ವ್ಯಕ್ತಿಗೆ, ರಾಜ್ಯಪಾಲರು ಶಿಕ್ಷೆಯನ್ನು ಕಡಿಮೆಗೊಳಿಸುವ ಅಥವಾ ಸಂಪೂರ್ಣ ಕ್ಷಮಾದಾನ ಮಾಡುವ ಅಧಿಕಾರವನ್ನು ಹೊಂದಿರುತ್ತಾರೆ. ಮರಣದಂಡನೆಗೊಳಗಾದ ವ್ಯಕ್ತಿಗೆ ಕ್ಷಮಾದಾನ ಮಾಡುವ ಅಧಿಕಾರವು ರಾಷ್ಟ್ರಾಧ್ಯಕ್ಷರಿಗೆ ಮಾತ್ರವಿರುತ್ತದೆ.
2. ರಾಜ್ಯ ಉಚ್ಚನ್ಯಾಯಾಲಯದ ನ್ಯಾಯಾಧೀಶರೊಂದಿಗೆ ಸಮಾಲೋಚಿಸಿ ಜಿಲ್ಲಾ ನ್ಯಾಯಾದೀಶರನ್ನು ನೇಮಕ ಮಾಡುವ ಮತ್ತು ಬಡ್ತಿ ನೀಡುವ ಅಧಿಕಾರವನ್ನು ಹೊಂದಿರುತ್ತಾರೆ.
3. ರಾಜ್ಯ ಉಚ್ಚನ್ಯಾಯಲಯಗಳ ನ್ಯಾಯಾಧೀಶರನ್ನು ನೇಮಿಸುವಾಗ ರಾಷ್ಟ್ರಪತಿಯವರು ರಾಜ್ಯಪಾಲರ ಜೊತೆ ಸಮಾಲೋಚಿಸುತ್ತಾರೆ.

**ಸುಗ್ರೀವಾಜ್ಞೆ:** ರಾಜ್ಯ ವಿಧಾನ ಮಂಡಲ ಅಧಿವೇಶನದಲ್ಲಿ ಇಲ್ಲದಿದ್ದಾಗ ರಾಜ್ಯಪಾಲರು ಹೊರಡಿಸುವ ಆಜ್ಞೆಯೇ ಸುಗ್ರೀವಾಜ್ಞೆ.

**5) ವಿವೇಚನಾಧಿಕಾರ:**

ಕೆಲವು ಸಂದರ್ಭಗಳಲ್ಲಿ ರಾಜ್ಯಪಾಲರು ಮಂತ್ರಿಮಂಡಲದ ಸಲಹೆಯಿಲ್ಲದೆ ಸ್ವಯಂ ವಿವೇಚನೆಯಿಂದ ನಿರ್ಧಾರಗಳನ್ನು ಕೈಗೊಂಡು ಕಾರ್ಯ ನಿರ್ವಹಿಸುವುದೇ ವಿವೇಚನಾಧಿಕಾರ.

ರಾಜ್ಯಪಾಲರಿಗಿರುವ ಪ್ರಮುಖ ವಿವೇಚನಾಧಿಕಾರಿಗಳು ಈ ಕೆಳಕಂಡಂತಿವೆ.

1. ಮುಖ್ಯಮಂತ್ರಿ ಮತ್ತು ಇತರ ಮಂತ್ರಿಗಳನ್ನು ನೇಮಿಸುವುದು.
2. ರಾಜ್ಯದಲ್ಲಿ ಸಂವಿಧಾನಾತ್ಮಕ ಬಿಕ್ಕಟ್ಟು ತಲೆದೋರಿದೆ ಎಂದು ಮನವರಿಕೆಯಾದರೆ ರಾಷ್ಟ್ರಪತಿಗಳಿಗೆ ವರದಿ ನೀಡುವುದು.
3. ಮುಖ್ಯಮಂತ್ರಿ ವಿಧಾನಸಭೆಯಲ್ಲಿ ಬಹುಮತ ಕಳೆದುಕೊಂಡಾಗ ಬೇರೆ ಯಾರು ಸರ್ಕಾರ ರಚಿಸಲು ಸಾಧ್ಯವಿಲ್ಲ ಎಂದೆನಿಸಿದಾಗ ವಿಧಾನಸಭೆಯನ್ನು ವಿಸರ್ಜಿಸಬಹುದು.
4. ರಾಷ್ಟ್ರಪತಿಗಳ ಅನುಮತಿ ಪಡೆದು ಸುಗ್ರೀವಾಜ್ಞೆಗಳನ್ನು ಹೊರಡಿಸುವುದು.

ಒಟ್ಟಿನಲ್ಲಿ ಹೇಳುವುದಾದರೆ, ರಾಜ್ಯಪಾಲರು ರಾಜ್ಯದ ಸಂವಿಧಾನಾತ್ಮಕ ಮುಖ್ಯಸ್ಥರಾಗಿ, ಕೇಂದ್ರದ ಪ್ರತಿನಿಧಿಯಾಗಿ, ಕೇಂದ್ರ ರಾಜ್ಯಗಳ ಸಂಪರ್ಕ ಸೇತುವೆಯಾಗಿ ಕಾರ್ಯನಿರ್ವಹಿಸುತ್ತಾರೆ. ವಿವೇಚನಾ ಅಧಿಕಾರಗಳಿಂದ ವಿಶೇಷ ಸ್ಥಾನ ಮಾನವನ್ನು ಪಡೆದಿರುತ್ತಾರೆ.

## ಮುಖ್ಯಮಂತ್ರಿ:

"ಮುಖ್ಯಮಂತ್ರಿ ರಾಜ್ಯದ ಸಮಸ್ತ ಅಧಿಕಾರದ ನೇತಾರ"

ಸಂಸದೀಯ ಸರ್ಕಾರ ವ್ಯವಸ್ಥೆಯಲ್ಲಿ, ಕೇಂದ್ರ ಮಟ್ಟದಲ್ಲಿ ಪ್ರಧಾನಮಂತ್ರಿಯ ಸ್ಥಾನದಂತೆ, ರಾಜ್ಯದಲ್ಲಿ ಮುಖ್ಯಮಂತ್ರಿಯ ಸ್ಥಾನವಿರುತ್ತದೆ. ರಾಜ್ಯ ಸರಕಾರದ ಯಶಸ್ಸು, ಇವರ ವ್ಯಕ್ತಿತ್ವ, ಚಾರಿತ್ರ್ಯ, ಅನುಭವ ಮತ್ತು ಸಾಮರ್ಥ್ಯವನ್ನು ಅವಲಂಬಿಸಿದೆ. ರಾಜ್ಯಮಟ್ಟದಲ್ಲಿ ಸಮಸ್ತ ಅಧಿಕಾರದ ಸೂತ್ರಧಾರನಾಗಿ ಕಾರ್ಯನಿರ್ವಹಿಸುತ್ತಾರೆ.

**1) ನೇಮಕ:**

ಸಂನಿಧಾನದ ವಿಧಿ 164 ರನ್ವಯ ರಾಜ್ಯಪಾಲರು ಮುಖ್ಯಮಂತ್ರಿಯನ್ನು ನೇಮಕ ಮಾಡುತ್ತಾರೆ. ರಾಜ್ಯಸಭೆಗೆ ಚುನಾವಣೆಗಳಾದ ಮೇಲೆ ಬಹುಮತ ಪಡೆದ ರಾಜಕೀಯ ಪಕ್ಷವು ಶಾಸಕಾಂಗದ ನಾಯಕನನ್ನು ಆಯ್ಕೆ ಮಾಡುತ್ತದೆ. ಆ ನಾಯಕನನ್ನು ರಾಜ್ಯಪಾಲರು ಮುಖ್ಯಮಂತ್ರಿ ಎಂದು ನೇಮಕ ಮಾಡುತ್ತಾರೆ.

**2) ಅರ್ಹತೆಗಳು:**

1. ಭಾರತದ ಪ್ರಜೆಯಾಗಿರಬೇಕು.
2. ಕನಿಷ್ಟ 25 ವರ್ಷ ವಯಸ್ಸನ್ನು ಹೊಂದಿರಬೇಕು.
3. ರಾಜ್ಯವಿಧಾನ ಮಂಡಲದ ಯಾವುದಾದರೊಂದು ಸದನದ ಸದಸ್ಯರಾಗಿರಬೇಕು.

**ಪ್ರಮಾಣವಚನ:**

ಮುಖ್ಯಮಂತ್ರಿ ಅಧಿಕಾರವನ್ನು ಪಡೆಯುವುದಕ್ಕಿಂತ ಮುಂಚಿತವಾಗಿ ರಾಜ್ಯಪಾಲರಿಂದ ಪ್ರಮಾಣವಚನವನ್ನು ಸ್ವೀಕರಿಸಬೇಕು.

**ಅಧಿಕಾರ ಮತ್ತು ಕಾರ್ಯಗಳು:**

ರಾಜ್ಯದ ನೈಜ ಕಾರ್ಯಾಂಗದ ಮುಖ್ಯಸ್ಥರಾಗಿ ಮುಖ್ಯಮಂತ್ರಿಯವರು ಈ ಕೆಳಗಿನ ಕಾರ್ಯಗಳನ್ನು ಹೊಂದಿರುತ್ತಾರೆ.

1. ಮಂತ್ರಿ ಮಂಡಲ ಸಭೆಗಳ ಅಧ್ಯಕ್ಷತೆ ವಹಿಸುತ್ತಾರೆ.
2. ರಾಜ್ಯ ಆಡಳಿತ ವ್ಯವಹಾರಗಳಿಗೆ ಸಂಬಂಧಿಸಿದ ಮಂತ್ರಿಮಂಡಲದ ಎಲ್ಲ ನಿರ್ಣಯಗಳನ್ನು ಮತ್ತು ಶಾಸನಗಳ ರಚನೆಯ ಪ್ರಸ್ತಾವಗಳನ್ನು ರಾಜ್ಯಪಾಲರಿಗೆ ತಿಳಿಸುತ್ತಾರೆ.
3. ಮಂತ್ರಿಗಳು ಮತ್ತು ರಾಜ್ಯಪಾಲರ ನಡುವೆ ಸಂಪರ್ಕ ಸೇತುವೆಯಾಗಿ ಕಾರ್ಯನಿರ್ವಹಿಸುತ್ತಾರೆ.
4. ಖಾತೆಗಳ ಹಂಚಿಕೆ ಮತ್ತು ಖಾತೆಗಳ ಬದಲಾವಣೆ ಮಾಡುವ ಅಧಿಕಾರ ಹೊಂದಿರುತ್ತಾರೆ.
5. ವಿವಿಧ ಇಲಾಖೆಗಳ ನಡುವೆ ಸಹಕಾರ, ಸಾಮರಸ್ಯದ ಕೊಂಡಿಯಾಗಿ ಕಾರ್ಯನಿರ್ವಹಿಸುತ್ತಾರೆ.
6. ವಿಧಾನ ಸಭೆಯ ವಿಸರ್ಜನೆ ಶಿಫಾರಸ್ಸು ಮಾಡುವ ಅಧಿಕಾರ ಹೊಂದಿದ್ದಾರೆ.
7. ವಿಧಾನ ಸಭೆಯ ನಾಯಕರಾಗಿ ಕಾರ್ಯನಿರ್ವಹಿಸುತ್ತಾರೆ.
8. ಸರಕಾರದ ನೀತಿ ನಿರೂಪಣೆಯಲ್ಲಿ ಪ್ರಮುಖ ಪಾತ್ರ ವಹಿಸುತ್ತಾರೆ.

## ರಾಜ್ಯ ಮಂತ್ರಿಮಂಡಲ:

ಸಂವಿಧಾನದ ವಿಧಿ-163 ರಾಜ್ಯಪಾಲರಿಗೆ ಕಾರ್ಯಗಳನ್ನು ನಿರ್ವಹಿಸಲು ಸಹಾಯ ಮತ್ತು ಸಲಹೆ ನೀಡಲು ಮುಖ್ಯಮಂತ್ರಿ ನೇತೃತ್ವದ ಮಂತ್ರಿಮಂಡಲವಿರಬೇಕೆಂದು ತಿಳಿಸುತ್ತದೆ. ಈ ಮಂತ್ರಿಮಂಡಲವು ಸರಕಾರದ ಎಲ್ಲಾ ಕಾರ್ಯಗಳನ್ನು ಮುಖ್ಯಮಂತ್ರಿಗಳ

ಮಾರ್ಗದರ್ಶನ ಮೇಲೆ ನಿರ್ವಹಿಸುತ್ತದೆ. ರಾಜ್ಯಪಾಲರ ವಿವೇಚನಾಧಿಕಾರಗಳನ್ನು ಹೊರತುಪಡಿಸಿ ಉಳಿದೆಲ್ಲಾ ವಿಷಯಗಳಿಗೆ ಸಂಬಂಧಿಸಿದಂತೆ ಸಲಹೆಯನ್ನು ನೀಡುತ್ತದೆ.

**ಮಂತ್ರಿಗಳ ನೇಮಕಾತಿ:**

ರಾಜ್ಯಪಾಲರು ಮುಖ್ಯಮಂತ್ರಿಗಳನ್ನು ನೇಮಿಸುತ್ತಾರೆ ಮತ್ತು ಮುಖ್ಯಮಂತ್ರಿಯವರ ಸಲಹೆಯ ಮೇರೆಗೆ ಮಂತ್ರಿಮಂಡಲದ ಇತರ ಮಂತ್ರಿಗಳನ್ನು ನೇಮಿಸುತ್ತಾರೆ.

**ಮಂತ್ರಿಗಳ ಅರ್ಹತೆ:**

1. ಭಾರತದ ನಾಗರಿಕರಾಗಿರಬೇಕು.
2. ಕನಿಷ್ಟ 25 ವರ್ಷ ವಯಸ್ಸನ್ನು ಹೊಂದಿರಬೇಕು.
3. ರಾಜ್ಯ ವಿಧಾನಮಂಡಲದ ಯಾವುದೇ ಸದನದ ಸದಸ್ಯರಾಗಿರಬೇಕು.

**ಪ್ರಮಾಣವಚನ:**

ರಾಜ್ಯಪಾಲರು ಮಂತ್ರಿಗಳಿಗೆ ಪ್ರತಿಜ್ಞಾವಿಧಿಯನ್ನು ಬೋಧಿಸುತ್ತಾರೆ

**ಮಂತ್ರಿಮಂಡಲದ ಗಾತ್ರ:**

ಭಾರತದ ಸಂಸತ್ತು 2003 ರಲ್ಲಿ 91 ನೇ ತಿದ್ದುಪಡಿಯ ಮೂಲಕ ರಾಜ್ಯದ ಮಂತ್ರಿಮಂಡಲದ ಗಾತ್ರವು ವಿಧಾನ ಸಭೆಯ ಒಟ್ಟು ಸದಸ್ಯರ ಶೇಕಡ 15 ಕ್ಕಿಂತ ಹೆಚ್ಚಿರಬಾರದು. ಅದರಂತೆ ಮಂತ್ರಿಮಂಡಲದ ಗಾತ್ರವು ಮುಖ್ಯಮಂತ್ರಿಯನ್ನೊಳಗೊಂಡಂತೆ ಕನಿಷ್ಠ 12 ಕ್ಕಿಂತಲೂ ಕಡಿಮೆಯಿರಬಾರದು.

**ವೇತನ ಮತ್ತು ಭತ್ಯೆಗಳು:**

ಮಂತ್ರಿಗಳು ರಾಜ್ಯವಿಧಾನ ಮಂಡಲ ಕಾನೂನು ಮೂಲಕ ನಿಗದಿಪಡಿಸಿದ ವೇತನ ಮತ್ತು ಭತ್ಯೆಯನ್ನು ಪಡೆಯುತ್ತಾರೆ.

## ಮಂತ್ರಿ ಮಂಡಲದ ಅಧಿಕಾರ ಮತ್ತು ಕಾರ್ಯಗಳು:

ಮಂತ್ರಿಮಂಡಲ ನಿರ್ವಹಿಸುವ ಕಾರ್ಯಗಳು ಈ ಕೆಳಗಿನಂತಿವೆ.

1. ಮಂತ್ರಿಮಂಡಲವು ವಿಧಾನಮಂಡಲದಲ್ಲಿ ಮಸೂದೆಗಳನ್ನು ಮಂಡಿಸಿ ಜಾರಿಗೆ ತರುವ ಅಧಿಕಾರ ಹೊಂದಿದೆ.
2. ಮಂತ್ರಿಮಂಡಲವು ಸಂವಿಧಾನಾತ್ಮಕವಾಗಿ ರಾಜ್ಯಪಾಲರ ಹೆಸರಿನಲ್ಲಿರುವ ಎಲ್ಲಾ ಕಾರ್ಯಾಂಗೀಯ ಅಧಿಕಾರಗಳನ್ನು ಜಾರಿಗೊಳಿಸುತ್ತದೆ.
3. ವಾರ್ಷಿಕ ಮುಂಗಡ ಪತ್ರವನ್ನು ಮಂಡಿಸುವುದು, ತೆರಿಗೆ ಸಂಗ್ರಹಿಸುವುದನ್ನು ಕಡಿಮೆ ಮಾಡುವ, ಬದಲಾಯಿಸುವ ಅಧಿಕಾರ ಹೊಂದಿದೆ.

4. ಸರಕಾರದ ನೀತಿಗಳನ್ನು ನಿರ್ಧರಿಸುವುದು.
5. ಆಡಳಿತದ ಮೇಲೆ ನಿಯಂತ್ರಣ ಮತ್ತು ಮೇಲ್ವಿಚಾರಣೆ ಮಾಡುವುದು.
6. ವಿವಿಧ ಇಲಾಖೆಗಳ ನಡುವೆ ಸಮನ್ವಯತೆಯನ್ನು ತರುವುದು.
7. ಸಂಪುಟ ಸಭೆಯಲ್ಲಿ ತೆಗೆದುಕೊಂಡ ತೀರ್ಮಾನಗಳನ್ನು ಅನುಷ್ಠಾನಗೊಳಿಸಲು ವಿವಿಧ ಇಲಾಖೆಗಳಿಗೆ ಕಳುಹಿಸುವುದು.

## ಕರ್ನಾಟಕದ ಮುಖ್ಯಮಂತ್ರಿಗಳು

| **ಕ್ರಮ ಸಂಖ್ಯೆ** | **ಹೆಸರುಗಳು** | **ಅಧಿಕಾರದ ಅವಧಿ** |
|---|---|---|
| 1. | ಕೆ. ಸಿ. ರೆಡ್ಡಿ | 24-10-1947 ರಿಂದ 30-03-1952 |
| 2. | ಕೆ. ಹನುಮಂತಯ್ಯ | 30-03-1952 ರಿಂದ 19-08-1956 |
| 3. | ಕಡಿದಾಳ್ ಮಂಜಪ್ಪ | 19-08-1956 ರಿಂದ 31-10-1956 |
| 4. | ಎಸ್. ನಿಜಲಿಂಗಪ್ಪ | 01-11-1956 ರಿಂದ 16-05-1958, 21-06-1962 ರಿಂದ 29-05-2968 |
| 5. | ಬಿ. ಡಿ. ಜತ್ತಿ | 16-05-1958 ರಿಂದ 09-03-1962 |
| 6. | ಎಸ್. ಆರ್. ಕಂಠಿ | 09-03-1962 ರಿಂದ 20-06-1962 |
| 7. | ವೀರೇಂದ್ರ ಪಾಟೀಲ್ | 29-05-1968 ರಿಂದ 27-03-1971, 30-11-1989 ರಿಂದ 10-10-1990 |
| 8. | ಡಿ. ದೇವರಾಜ ಅರಸು | 28-03-1972 ರಿಂದ 31-12-1977, 28-02-1978 ರಿಂದ 11-01-1980 |
| 9. | ಆರ್. ಗುಂಡೂರಾವ್ | 12-01-1980 ರಿಂದ 09-01-1983 |
| 10. | ರಾಮಕೃಷ್ಣ ಹೆಗಡೆ | 10-01-1983 ರಿಂದ 12-08-1988 |
| 11. | ಎಸ್. ಆರ್. ಬೊಮ್ಮಾಯಿ | 13-08-1988 ರಿಂದ 21-04-1989 |
| 12. | ಎಸ್. ಬಂಗಾರಪ್ಪ | 17-10-1990 ರಿಂದ 19-11-1992 |
| 13. | ಎಂ ವೀರಪ್ಪ ಮೊಯಿಲಿ | 20-11-1992 ರಿಂದ 10-12-1994 |
| 14. | ಎಚ್. ಡಿ. ದೇವೇಗೌಡ | 11-12-1994 ರಿಂದ 30-05-1996 |
| 15. | ಜೆ. ಎಚ್. ಪಟೇಲ್ | 31-05-1996 ರಿಂದ 10-10-1999 |
| 16. | ಎಸ್. ಎಂ. ಕೃಷ್ಣ | 11-10-1999 ರಿಂದ 28-05-2004 |
| 17. | ಎನ್. ಧರ್ಮಸಿಂಗ್ | 28-05-2004 ರಿಂದ 02-02-2006 |
| 18. | ಹೆಚ್. ಡಿ. | 03-02-2006 ರಿಂದ 08-10-2007 |

| | | |
|---|---|---|
| | ಕುಮಾರಸ್ವಾಮಿ | |
| 19. | ಬಿ. ಎಸ್. ಯಡಿಯೂರಪ್ಪ | 12-11-2007 ರಿಂದ 19-11-2007, 30-05-2008 ರಿಂದ 31-07-2011 |
| 20. | ಡಿ. ವಿ. ಸದಾನಂದಗೌಡ | 04-08-2011 ರಿಂದ 12-07-2012 |
| 21. | ಜಗದೀಶ್ ಶೆಟ್ಟರ್ | 12-07-2012 ರಿಂದ 12-05-2013 |
| 22. | ಸಿದ್ದರಾಮಯ್ಯ | 13-05-2013 ರಿಂದ |

## ಅಭ್ಯಾಸ

**ಒಂದು ವಾಕ್ಯದಲ್ಲಿ ಉತ್ತರಿಸಿ.**

1. ರಾಜ್ಯಪಾಲರನ್ನು ಯಾರು ನೇಮಕ ಮಾಡುತ್ತಾರೆ?
2. ರಾಜ್ಯಪಾಲರ ಅಧಿಕಾರಾವಧಿ ಎಷ್ಟು?
3. ರಾಜ್ಯಪಾಲರಾಗಲು ಕನಿಷ್ಠ ಎಷ್ಟು ವಯಸ್ಸನ್ನು ಹೊಂದಿರಬೇಕು?
4. ಮುಖ್ಯಮಂತ್ರಿಯನ್ನು ಯಾರು ನೇಮಕ ಮಾಡುತ್ತಾರೆ?
5. ಮಂತ್ರಿಗಳಿಗೆ ಪ್ರಮಾಣವಚನವನ್ನು ಯಾರು ಬೋಧಿಸುತ್ತಾರೆ?

**II. ಬಿಟ್ಟ ಸ್ಥಳದಲ್ಲಿ ಸೂಕ್ತ ಪದವನ್ನು ತುಂಬಿರಿ.**

1. ರಾಜ್ಯದಲ್ಲಿ ಸಂವಿಧಾನದ ಮುಖ್ಯಸ್ಥರು ________.
2. ರಾಜ್ಯಪಾಲರ ವೇತನವನ್ನು ________ ನಿರ್ಧರಿಸುತ್ತದೆ.
3. ರಾಜ್ಯದ ಅಡ್ವೋಕೇಟ್ ಜನರಲ್‌ನ್ನು ________ ನೇಮಕ ಮಾಡುತ್ತಾರೆ.
4. ಹಣಕಾಸು ಮಸೂದೆಯನ್ನು ________ ಸದನದಲ್ಲಿ ಮಂಡಿಸಬೇಕು.
5. ಮಂತ್ರಿಮಂಡಲದ ಅಧ್ಯಕ್ಷತೆಯನ್ನು ________ ವಹಿಸುತ್ತಾರೆ.

**III. ಎರಡು ಅಥವಾ ಮೂರು ವಾಕ್ಯಗಳಲ್ಲಿ ಉತ್ತರಿಸಿ.**

1. ರಾಜ್ಯಪಾಲರ ವೇತನವನ್ನು ಯಾರು ನಿರ್ಧರಿಸುತ್ತಾರೆ? ಮತ್ತು ಪ್ರಸ್ತುತ ಎಷ್ಟಿದೆ?
2. ವಿವೇಚನಾ ಅಧಿಕಾರ ಎಂದರೇನು?
3. ರಾಜ್ಯದ ಮಂತ್ರಿಮಂಡಲದ ಗಾತ್ರವನ್ನು ತಿಳಿಸಿ.

4. ರಾಜ್ಯಪಾಲರ ವೇತನವನ್ನು ಯಾವ ನಿಧಿಯಿಂದ ನೀಡಲಾಗಿದೆ? ಮತ್ತು ಪ್ರಸ್ತುತ ಮಾಸಿಕ ವೇತನ ಎಷ್ಟಿದೆ?

**IV. ನಾಲ್ಕು ಅಥವಾ ಐದು ವಾಕ್ಯಗಳಲ್ಲಿ ಉತ್ತರಿಸಿ.**

1. ರಾಜ್ಯಪಾಲರಾಗಲು ಇರುವ ಅರ್ಹತೆಗಳಾವವು?
2. ರಾಜ್ಯಪಾಲರ ವಿವೇಚನಾಧಿಕಾರಗಳಾವವು?
3. ಮುಖ್ಯಮಂತ್ರಿಯಾಗಲು ಇರುವ ಅರ್ಹತೆಗಳೇನು?

**V. ಎಂಟು ಅಥವಾ ಹತ್ತು ವಾಕ್ಯಗಳಲ್ಲಿ ಉತ್ತರಿಸಿ.**

1. ರಾಜ್ಯಪಾಲರ ಅಧಿಕಾರ ಮತ್ತು ಕಾರ್ಯಗಳನ್ನು ವಿಮರ್ಶಿಸಿರಿ.
2. ಮುಖ್ಯಮಂತ್ರಿಯ ಅಧಿಕಾರ ಮತ್ತು ಕಾರ್ಯಗಳನ್ನು ವಿವರಿಸಿ.
3. ಮಂತ್ರಿಮಂಡಲದ ಅಧಿಕಾರ ಮತ್ತು ಕಾರ್ಯಗಳನ್ನು ವಿಶ್ಲೇಷಿಸಿ.

**ಸಲಹಾತ್ಮಕ ಚಟುವಟಿಕೆಗಳು:**

1. ಕರ್ನಾಟಕದ ಮಾಜಿ ಮುಖ್ಯಮಂತ್ರಿಗಳ ಒಂದೊಂದು ವಿಶಿಷ್ಟ ಸಾಧನೆಗಳನ್ನು ಪಟ್ಟಿಮಾಡಿ.
2. “ನನ್ನ ಮೆಚ್ಚಿನ ಮುಖ್ಯಮಂತ್ರಿ” ಈ ಕುರಿತು ಪ್ರಬಂಧ ಬರೆಯಿರಿ.

## ಅಧ್ಯಾಯ- 9 ರಾಜ್ಯಶಾಸಕಾಂಗ (STATE LEGISLATURE)

### ಕಲಿಕಾ ಉದ್ದೇಶಗಳು:

1. ಕೇಂದ್ರದ ಮಾದರಿ ಸಂಸದೀಯ ಸರ್ಕಾರದ ವ್ಯವಸ್ಥೆಯ ಬಗ್ಗೆ ಅರಿವು ಮೂಡಿಸುವುದು.
2. ಕೇಂದ್ರ ಸಂಸತ್ತನ್ನು ರಾಜ್ಯ ಶಾಸಕಾಂಗದೊಂದಿಗೆ ತುಲನೆ ಮಾಡುವುದು.
3. ರಾಜ್ಯ ಶಾಸಕಾಂಗದ ರಚನೆ, ಪ್ರಾಮುಖ್ಯತೆ ಹಾಗೂ ಸ್ಥಾನ ಮಾನಗಳನ್ನು ಅರಿಯುವುದು.
4. ವಿಧಾನ ಪರಿಷತ್ತಿನ ಆಗತ್ಯತೆ, ಅಧಿಕಾರ ಹಾಗೂ ಕಾರ್ಯಗಳ ಬಗ್ಗೆ ಅರಿವು ಮೂಡಿಸುವುದು.
5. ವಿಧಾನ ಸಭೆಯ ಮಹತ್ವ, ಅಧಿಕಾರ ಹಾಗೂ ಕಾರ್ಯಗಳ ಬಗ್ಗೆ ಅರಿವು ಮೂಡಿಸುವುದು.
6. ವಿಧಾನ ಸಭೆಯ ಸ್ಪೀಕರ್ ಸ್ಥಾನದ ಬಗ್ಗೆ ತಿಳುವಳಿಕೆ ಮೂಡಿಸುವುದು.

“ವಾಸ್ತವವಾಗಿ ರಾಜ್ಯ ಶಾಸಕಾಂಗಗಳು ಸಂಸತ್ತಿನ ಅಧೀನ ಶಾಸಕಾಂಗಗಳಾಗಿ ಕಾರ್ಯ ನಿರ್ವಹಿಸುತ್ತವೆ”. **ಜೆ. ಸಿ. ಜೋಹಾರಿ.**

ನಮ್ಮ ಕೇಂದ್ರ ಶಾಸಕಾಂಗದಂತೆ ರಾಜ್ಯ ಶಾಸಕಾಂಗವು ಪ್ರಮುಖವಾದುದಾಗಿದೆ. ನಮ್ಮ ಭಾರತ ಸಂವಿಧಾನದ 6 ನೇ ಭಾಗದಲ್ಲಿರುವ 168 ರಿಂದ 212 ರ ವರೆಗಿನ ವಿಧಿಗಳು ರಾಜ್ಯ ವಿಧಾನಮಂಡಲದ ರಚನೆ, ಅಧಿಕಾರ ಮತ್ತು ಕಾರ್ಯಗಳ ಬಗ್ಗೆ ವಿವರಿಸುತ್ತವೆ.

ರಾಜ್ಯ ಶಾಸಕಾಂಗವು ರಾಜ್ಯಪಾಲರು, ವಿಧಾನಸಭೆ ಮತ್ತು ವಿಧಾನಪರಿಷತ್ತನ್ನು ಒಳಗೊಂಡಿರುತ್ತದೆ. ಸಂವಿಧಾನದ 168 ನೇ ವಿಧಿಯ ಪ್ರಕಾರ ಪ್ರತಿಯೊಂದು ರಾಜ್ಯವು ತನ್ನದೆ ಆದ ಶಾಸಕಾಂಗವನ್ನು ಹೊಂದಬಹುದು. ಸಂಬಧಪಟ್ಟ ರಾಜ್ಯದ ವಿಧಾನಸಭೆ ತನ್ನ ಒಟ್ಟು ಸದಸ್ಯರ ಸಂಖ್ಯೆಯ ಬಹುಮತದಿಂದ ಮತ್ತು ಹಾಜರಿರುವ 2/ 3 ಸದಸ್ಯರಿಂದ ಒಂದು ನಿರ್ಣಯವನ್ನು ಅಂಗೀಕರಿಸಿ ವಿಧಾನಪರಿಷತ್ತನ್ನು ರದ್ದುಗೊಳಿಸುವರೆತೆ ಅಥವಾ ಹೊಸದಾಗಿ ರಚಿಸುವಂತೆ ಕೇಂದ್ರ ಸರ್ಕಾರಕ್ಕೆ ಶಿಫಾರಸ್ಸು ಮಾಡಬಹುದು. ಆಗ ಸಂಸತ್ತು ನಿರ್ಣಯಕ್ಕನುಗುಣವಾಗಿ ಕ್ರಮ ಕೈಗೊಳ್ಳಬಹುದು.

ವಿಧಾನಸಭೆ ಮತ್ತು ವಿಧಾನ ಪರಿಷತ್ತನ್ನೊಳಗೊಂಡಿರುವ ಶಾಸಕಾಂಗವನ್ನು ‘ವಿಧಾನ ಮಂಡಲ’ ಎಂತಲೂ ಕರೆಯಲಾಗುತ್ತದೆ. ರಾಜ್ಯ ಶಾಸಕಾಂಗದ ರಚನೆ, ಕಾರ್ಯಕಲಾಪ, ರೀತಿ- ನೀತಿಗಳು ಬಹುತೇಕವಾಗಿ ಕೇಂದ್ರ ಶಾಸಕಾಂಗವನ್ನು ಹೋಲುತ್ತವೆ. ಹೆಚ್ಚಿನ ರಾಜ್ಯಗಳಲ್ಲಿ ‘ಏಕ ಸದನ’ ಶಾಸಕಾಂಗ ಪದ್ಧತಿಯನ್ನೂ ಅಳವಡಿಸಿಕೊಂಡಿರುವುದರಿಂದ ಅವು ವಿಧಾನಸಭೆಯನ್ನು ಮಾತ್ರ ಹೊಂದಿವೆ. ಕರ್ನಾಟಕ, ತೆಲಂಗಾಣ, ಸೀಮಾಂಧ್ರ, ಮಹಾರಾಷ್ಟ್ರ,

ಬಿಹಾರ, ಉತ್ತರ ಪ್ರದೇಶ, ಜಮ್ಮು ಮತ್ತು ಕಾಶ್ಮೀರ ರಾಜ್ಯಗಳು ದ್ವಿಸದನ ಶಾಸಕಾಂಗ ಪದ್ಧತಿಯನ್ನು ಹೊಂದಿವೆ. ಇಲ್ಲಿ ಮೇಲ್ಮನೆಯನ್ನು ವಿಧಾನಪರಿಷತ್ ಎಂದೂ ಕೆಳಮನೆಯನ್ನು ವಿಧಾನ ಸಭೆ ಎಂದು ಕರೆಯಲಾಗುತ್ತದೆ.

ಸಾರ್ವತ್ರಿಕ ವಯಸ್ಕ ಮತದಾನ ಪದ್ಧತಿಯಿಂದ ಚುನಾಯಿತರಾದ ಪ್ರತಿನಿಧಿಗಳನ್ನು ಹೊಂದಿರುವ ವಿಧಾನ ಸಭೆಯು ವಿಧಾನ ಪರಿಷತ್ತಿಗಿಂತಲೂ ಹೆಚ್ಚಿನ ಅಧಿಕಾರಗಳನ್ನು ಹೊಂದಿದೆ.

## ವಿಧಾನ ಪರಿಷತ್ತು (Legislative council)

ವಿಧಾನ ಪರಿಷತ್ತು ರಾಜ್ಯ ವಿಧಾನ ಮಂಡಲದ ಮೇಲ್ಮನೆಯಾಗಿದೆ. ವಿಧಾನಪರಿಷತ್ತು ಚುನಾಯಿತ ಹಾಗೂ ರಾಜ್ಯಪಾಲರಿಂದ ನಾಮಕರಣಗೊಂಡ ಸದಸ್ಯರನ್ನೊಳಗೊಂಡ ಸದನವಾಗಿದೆ.

### *ರಚನೆ:*

ಸಂವಿಧಾನದ 171 ನೇ ವಿಧಿಯು ವಿಧಾನಪರಿಷತ್ತಿನ ರಚನೆಗೆ ಸಂಬಂಧಿಸಿದೆ. ಇದರನ್ವಯ ವಿಧಾನಪರಿಷತ್ತಿನ ಒಟ್ಟು ಸದಸ್ಯರ ಸಂಖ್ಯೆ 40 ಕ್ಕಿಂತ ಕಡಿಮೆ ಇರುವಂತಿಲ್ಲ ಮತ್ತು ಸಂಬಂಧಪಟ್ಟ ರಾಜ್ಯದ ವಿಧಾನ ಸಭೆಯ ಒಟ್ಟು ಸದಸ್ಯರ ಸಂಖ್ಯೆಯ 1/ 3 ಕ್ಕಿಂತ ಹೆಚ್ಚು ಇರುವಂತಿಲ್ಲ ವಿಧಾನಪರಿಷತ್ತಿನ ಸದಸ್ಯರನ್ನು ಚುನಾವಣೆ ಮತ್ತು ನಾಮನಿರ್ದೇಶನದ ಮೂಲಕ ಆಯ್ಕೆ ಮಾಡಲಾಗುತ್ತದೆ. ಉದಾಹರಣೆಗಾಗಿ ಕರ್ನಾಟಕದ ವಿಧಾನಪರಿಷತ್ತಿನ ರಚನೆಯನ್ನು ಗಮನಿಸಬಹುದು. ಕರ್ನಾಟಕದ ವಿಧಾನಪರಿಷತ್ತು 75 ಮಂದಿ ಸದಸ್ಯರನ್ನೊಳಗೊಂಡಿದೆ.

**1) ಗಾತ್ರ:**

ವಿಧಾನ ಪರಿಷತ್ತಿನ ಸದಸ್ಯರು ಈ ಕೆಳಕಂಡಂತೆ ಆಯ್ಕೆಯಾಗುತ್ತಾರೆ.

1. 1/3 ಅಂದರೆ 25 ರಷ್ಟು ಸದಸ್ಯರನ್ನು ವಿಧಾನಸಭೆಯ ಸದಸ್ಯರಿಂದ ಚುನಾಯಿಸಲಾಗುತ್ತದೆ.
2. 1/3 ಅಂದರೆ 25 ರಷ್ಟು ಸದಸ್ಯರು ಸ್ಥಳೀಯ ಸಂಸ್ಥೆಗಳಿಂದ ಚುನಾಯಿತರಾಗುತ್ತಾರೆ.
3. 1/12 ಅಂದರೆ 7 ರಷ್ಟು ಸದಸ್ಯರನ್ನು ಶಿಕ್ಷಕರ ಕ್ಷೇತ್ರದಿಂದ ಚುನಾಯಿಸಲಾಗುತ್ತದೆ.
4. 1/12 ಅಂದರೆ 7 ರಷ್ಟು ಸದಸ್ಯರನ್ನು ಪದವೀಧರರ ಕ್ಷೇತ್ರದಿಂದ ಚುನಾಯಿಸಲಾಗುತ್ತದೆ.
5. 1/6 ಅಂದರೆ 7 ರಷ್ಟು ಸ್ಥಾನಗಳಿಗೆ ರಾಜ್ಯಪಾಲರು ಕಲೆ, ವಿಜ್ಞಾನ, ಸಮಾಜ ಸೇವೆ, ಸಾಹಿತ್ಯ, ಸಹಕಾರ ಚಳುವಳಿ ಕ್ಷೇತ್ರಗಳಲ್ಲಿ ಗಣನೀಯ ಸೇವೆ ಸಲ್ಲಿಸಿರುವ ವ್ಯಕ್ತಿಗಳನ್ನು ಸದಸ್ಯರನ್ನಾಗಿ ನಾಮಕರಣ ಮಾಡುತ್ತಾರೆ.

**2) ಅರ್ಹತೆಗಳು:**

ವಿಧಾನ ಪರಿಷತ್ತಿಗೆ ಸದಸ್ಯರಾಗಿ ಆಯ್ಕೆಯಾಗಲು ಈ ಕೆಳಕಂಡ ಅರ್ಹತೆಗಳನ್ನು ಹೊಂದಿರಬೇಕು.

1. ಭಾರತೀಯ ಪೌರನಾಗಿರಬೇಕು.
2. ಕನಿಷ್ಠ 30 ವರ್ಷ ವಯೋಮಿತಿಯುಳ್ಳವರಾಗಿರಬೇಕು.
3. ಕೇಂದ್ರ ಅಥವಾ ರಾಜ್ಯ ಸರ್ಕಾರದ ಯಾವುದೇ ಲಾಭದಾಯಕ ಹುದ್ದೆಯಲ್ಲಿರಬಾರದು.
4. ಮಾನಸಿಕ ಅಸ್ವಸ್ಥ, ಆರ್ಥಿಕವಾಗಿ ದಿವಾಳಿ, ಅಪರಾಧಿಯು ಆಗಿರಬಾರದು.
5. ಕಾಲಕಾಲಕ್ಕೆ ಸಂಸತ್ತು ನಿಗದಿಪಡಿಸುವ ಇತರೆ ಅರ್ಹತೆಗಳನ್ನು ಹೊಂದಿರತಕ್ಕದ್ದು.

**3) ಅಧಿಕಾರಾವಧಿ:**

ವಿಧಾನ ಪರಿಷತ್ತು ಶಾಶ್ವತ ಸದನವಾಗಿದೆ. ಸದಸ್ಯರ ಅಧಿಕಾರವಧಿ 6 ವರ್ಷಗಳು. 1/ 3 ರಷ್ಟು ಸದಸ್ಯರು ಪ್ರತಿ ಎರಡು ವರ್ಷಗಳಿಗೊಮ್ಮೆ ನಿವೃತ್ತರಾಗುತ್ತಾರೆ ಮತ್ತು ಅಷ್ಟೇ ಸಂಖ್ಯೆಯ ಸದಸ್ಯರು ಆಯ್ಕೆಯಾಗುತ್ತಾರೆ.

**4) ಅಧಿವೇಶನಗಳು:**

ವಿಧಾನಪರಿಷತ್ತಿನ ಅಧಿವೇಶನವನ್ನು ಕರೆಯುವ ಅಧಿಕಾರ ರಾಜ್ಯಪಾಲರಿಗಿದೆ. ವಿಧಾನ ಪರಿಷತ್ತು ವರ್ಷಕ್ಕೆ 3 ಭಾರಿ ಅಧಿವೇಶನ ಸೇರುತ್ತದೆ. 2 ಅಧಿವೇಶನಗಳ ನಡುವಿನ ಅಂತರ 6 ತಿಂಗಳ ಅವಧಿಯನ್ನು ಮೀರುವಂತಿಲ್ಲ.

**5) ಕೋರಂ:**

ಸದನದ ಕಾರ್ಯಕಲಾಪಗಳನ್ನು ನಡೆಸಲು ಸದನದಲ್ಲಿ ಹಾಜರಿರಬೇಕಾದ ಸದಸ್ಯರ ಕನಿಷ್ಠ ಸಂಖ್ಯೆಯನ್ನು ಕೋರಂ ಎಂದು ಕರೆಯುತ್ತಾರೆ. ಒಟ್ಟು ಸದಸ್ಯರಲ್ಲಿ 1/ 10 ರಷ್ಟು ಸದಸ್ಯರು ಕಾರ್ಯಕಲಾಪ ನಡೆಸಲು ಕಡ್ಡಾಯವಾಗಿ ಹಾಜರಿರಬೇಕು. ಕೋರಂನ ಕೊರತೆಯಿದ್ದಲ್ಲಿ ಸಭಾಪತಿಗಳು ಕಾರ್ಯಕಲಾಪಗಳನ್ನು ಮುಂದೂಡುತ್ತಾರೆ.

**6) ಸಭಾಪತಿ ಮತ್ತು ಉಪಸಭಾಪತಿ:**

ವಿಧಾನಪರಿಷತ್ತಿನ ಸದಸ್ಯರು ಸದನದ ಕಲಾಪಗಳನ್ನು ನಿಯಮಾನುಸಾರ ನಡೆಸಿಕೊಂಡು ಹೋಗಲು ಸದಸ್ಯರಲ್ಲಿಯೇ ಒಬ್ಬರನ್ನು ಸಭಾಪತಿಯನ್ನಾಗಿ ಆಯ್ಕೆ ಮಾಡಿಕೊಳ್ಳುತ್ತಾರೆ. ಸಭಾಪತಿಯಾಗಿ ಆಯ್ಕೆಯಾಗುವವರು ಪಕ್ಷಾತೀತವಾಗಿ ಕಾರ್ಯನಿರ್ವಹಿಸುತ್ತಾರೆ. ಇವರ ಗೈರು ಹಾಜರಿಯಲ್ಲಿ ಸದನದ ಕಾರ್ಯಕಲಾಪಗಳನ್ನು ನಡೆಸಿಕೊಂಡು ಹೋಗಲು ಒಬ್ಬರನ್ನು ಉಪಸಭಾಪತಿಯನ್ನಾಗಿ ಆಯ್ಕೆ ಮಾಡಿಕೊಳ್ಳುತ್ತಾರೆ.

### ವಿಧಾನ ಪರಿಷತ್ತಿನ ಅಧಿಕಾರ ಮತ್ತು ಕಾರ್ಯಗಳು:

ವಿಧಾನ ಪರಿಷತ್ತಿನ ಅಧಿಕಾರ ಮತ್ತು ಕಾರ್ಯಗಳು ಈ ಕೆಳಗಿನಂತಿವೆ.

**1) ಶಾಸನೀಯ ಅಧಿಕಾರ ಮತ್ತು ಕಾರ್ಯಗಳು:**

1. ವಿಧಾನಸಭೆಯಿಂದ ಅಂಗೀಕರಿಸಿದ ಮಸೂದೆಗಳನ್ನು ವಿಧಾನಪರಿಷತ್ತಿಗೆ ಕಳುಹಿಸಿದಾಗ ಮಸೂದೆಯನ್ನು ಅದು ಒಪ್ಪಬಹುದು ಇಲ್ಲವೆ 3 ತಿಂಗಳ ವರೆಗೆ ತನ್ನಲ್ಲಿ ಉಳಿಸಿಕೊಳ್ಳಬಹುದು. ನಂತರ ಅದನ್ನು ಒಪ್ಪಬಹುದು ಅಥವಾ ತಿರಸ್ಕರಿಸಬಹುದು.
2. 2 ನೇ ಬಾರಿಗೆ ವಿಧಾನ ಸಭೆ ಮಸೂದೆಯನ್ನು ಅಂಗೀಕರಿಸಿ ವಿಧಾನ ಪರಿಷತ್ತಿಗೆ ಕಳುಹಿಸಿಕೊಟ್ಟಾಗ ಅಂತಹ ಮಸೂದೆಯನ್ನು ವಿಧಾನ ಸಭೆಗೆ ವಾಪಸ್ಸು ಕಳುಹಿಸಬೇಕು. ಇಲ್ಲದಿದ್ದರೆ 2 ಸದನಗಳು ಅನುಮೋದಿಸಿವೆ ಎಂದು ತಿಳಿದು ರಾಜ್ಯಪಾಲರ ಒಪ್ಪಿಗೆಗೆ ಕಳುಹಿಸಿಕೊಡಲಾಗುತ್ತದೆ.

ಸಾಮಾನ್ಯ ಮಸೂದೆಗಳನ್ನು ಮೊದಲು ವಿಧಾನ ಪರಿಷತ್ತಿನಲ್ಲಿಯೂ ಮಂಡಿಸಬಹುದು. (ಹಣಕಾಸಿನ ಮಸೂದೆಯನ್ನು ಹೊರತುಪಡಿಸಿ)

**2) ಕಾರ್ಯಾಂಗೀಯ ಅಧಿಕಾರ ಮತ್ತು ಕಾರ್ಯಗಳು: (ಕಾರ್ಯಾಂಗದ ಮೇಲೆ ನಿಯಂತ್ರಣ)**

1. ವಿಧಾನ ಪರಿಷತ್ತಿನ ಸದಸ್ಯರು ಮಂತ್ರಿಗಳಿಂದ ಅವರ ಖಾತೆಗೆ ಸಂಬಂಧಿಸಿದಂತೆ ಪ್ರಶ್ನೆಗಳನ್ನು ಕೇಳಿ ಸೂಕ್ತ ಉತ್ತರ ಪಡೆಯಬಹುದು.
2. ವಿಧಾನ ಪರಿಷತ್ತಿನ ಸದಸ್ಯರು ಆಯವ್ಯಯ ಪಟ್ಟಿಯ ಮೇಲಿನ ಚರ್ಚೆ, ಇಲಾಖಾ ವರದಿಗಳ ಮೇಲಿನ ಚರ್ಚೆ ಹಾಗೂ ಖಂಡನಾ ನಿರ್ಣಯಗಳ ಮೇಲಿನ ಚರ್ಚೆಗಳಲ್ಲಿ ಭಾಗವಹಿಸುವ ಮೂಲಕ ಮಂತ್ರಿಮಂಡಲವನ್ನು ನಿಯಂತ್ರಿಸಬಹುದು.

**3) ಹಣಕಾಸಿನ ಅಧಿಕಾರ ಮತ್ತು ಕಾರ್ಯಗಳು:**

1. ವಿಧಾನಸಭೆ ಅಂಗೀಕರಿಸಿದ ಹಣಕಾಸು ಮಸೂದೆಯನ್ನು ವಿಧಾನ ಪರಿಷತ್ತಿಗೆ ಅಂಗೀಕಾರಕ್ಕಾಗಿ ಕಳುಹಿಸಿಕೊಟ್ಟಾಗ ಅದು ತನ್ನ ಸಲಹೆಗಳೊಡನೆ 14 ದಿನಗಳ ಒಳಗಾಗಿ ವಿಧಾನಸಭೆಗೆ ವಾಪಸ್ಸು ಕಳುಹಿಸಬೇಕು.
2. ವಿಧಾನ ಪರಿಷತ್ತಿಗೆ 14 ದಿನಗಳ ಕಾಲ ತಡೆ ಹಿಡಿಯುವ ಅಧಿಕಾರ ಹೊರತುಪಡಿಸಿ ಹಣಕಾಸಿನ ಮಸೂದೆಗೆ ಸಂಬಂಧಿಸಿದಂತೆ ಬೇರೆ ಯಾವುದೇ ಹೆಚ್ಚಿನ ಅಧಿಕಾರವಿರುವುದಿಲ್ಲ.

**4) ಚುನಾವಣಾ ಅಧಿಕಾರ ಮತ್ತು ಕಾರ್ಯಗಳು:**

ವಿಧಾನ ಪರಿಷತ್ತಿನ ಸದಸ್ಯರು ತಮ್ಮ ಸದನದ ಸಭಾಪತಿ ಮತ್ತು ಉಪಸಭಾಪತಿಗಳನ್ನು ಚುನಾಯಿಸುತ್ತಾರೆ.

## ವಿಧಾನ ಪರಿಷತ್ತಿನ ಅಗತ್ಯತೆ:

ವಿಧಾನ ಪರಿಷತ್ತು ವಿಧಾನ ಸಭೆಯಷ್ಟು ಕಾರ್ಯಂಗಾಧಿಕಾರಗಳನ್ನು ಮತ್ತು ಸ್ಥಾನಮಾನಗಳನ್ನು ಹೊಂದಿದ ಸದನವಲ್ಲ. ಆದುದರಿಂದ ವಿಧಾನ ಪರಿಷತ್ತು

ಆಗತ್ಯವಿಲ್ಲವೆಂಬುದು ಕೆಲವು ಚಿಂತಕರ ಅಭಿಪ್ರಾಯವಾಗಿದೆ. ಆದರೂ ಕೆಲವು ಚಿಂತಕರ ಅಭಿಪ್ರಾಯದಂತೆ ಈ ಕೆಳಕಂಡ 3 ಪ್ರಮುಖ ಅಂಶಗಳು ವಿಧಾನಪರಿಷತ್ತಿನ ಆಗತ್ಯತೆಯನ್ನು ಒತ್ತಿ ಹೇಳಿವೆ. ಅವುಗಳೆಂದರೆ,

**1) ವಿಧಾನಸಭೆಯ ಕಾರ್ಯದ ಒತ್ತಡವನ್ನು ಕಡಿಮೆ ಮಾಡಲು:**

ವಿಧಾನಸಭೆ ಅಂಗೀಕರಿಸಿದ ಮಸೂದೆಗಳಲ್ಲಿ ಲೋಪದೋಷಗಳಿದ್ದರೆ ಅದನ್ನು ವಿಧಾನಪರಿಷತ್ತು ತಿದ್ದಿ ಸರಿಪಡಿಸುತ್ತದೆ. ಇದರ ಜೊತೆಗೆ ಇಂದಿನ ರಾಜ್ಯಗಳು ಕಲ್ಯಾಣ ರಾಜ್ಯಗಳಾಗಿರುವುದರಿಂದ ಸರ್ಕಾರದ ಕಾರ್ಯದೊತ್ತಡವು ಅಧಿಕವಾಗಿರುತ್ತದೆ. ಆದುದರಿಂದ ವಿಧಾನ ಪರಿಷತ್ತು ಕೆಲವೊಂದು ಮಸೂದೆಗಳನ್ನೂ ಮೊದಲು ಚರ್ಚೆಗೆ ತೆಗೆದುಕೊಂಡು ಅವುಗಳನ್ನು ಕೂಲಂಕುಶವಾಗಿ ಚರ್ಚಿಸುವ ಮೂಲಕ ವಿಧಾನಸಭೆಯ ಕಾರ್ಯದೊತ್ತಡವನ್ನು ಕಡಿಮೆ ಮಾಡುತ್ತದೆ.

**2) ಆತುರದ ಮಸೂದೆಗಳು ಕಾನೂನು ಆಗದಂತೆ ತಡೆಗಟ್ಟಲು:**

ವಯಸ್ಕ ಮತದಾನ ಪದ್ಧತಿಯ ಪರಿಣಾಮವಾಗಿ ಕೆಲವು ಬಾರಿ ಸಮರ್ಥ ಪ್ರತಿನಿಧಿಗಳನ್ನು ಆಯ್ಕೆ ಮಾಡಲು ಕಷ್ಟವಾಗಬಹುದು. ಸಾಮಾನ್ಯ ಅರ್ಹತೆಗಳನ್ನು ಹೊಂದಿದ ಪ್ರತಿಯೊಬ್ಬ ವ್ಯಕ್ತಿಯು ಚುನಾವಣೆಗಳಲ್ಲಿ ಸ್ಪರ್ಧಿಸಲು ಅವಕಾಶವಿರುವುದರಿಂದ ಕೆಲವೊಮ್ಮೆ ಪರಿಣತಿ ಇಲ್ಲದವರೂ ಚುನಾಯಿತರಾಗಿ ಜನಪ್ರತಿನಿಧಿಗಳಾಗುತ್ತಾರೆ. ಇವರುಗಳು ಭಾವೋದ್ವೇಗಕ್ಕೆ ಒಳಗಾಗಿ ತಮ್ಮ ಮತದಾರರನ್ನು ತೃಪ್ತಿಪಡಿಸಲು ಯಾವುದೇ ಮಾಹಿತಿಯನ್ನು ಸೂಕ್ಷ್ಮವಾಗಿ ಪರಿಶೀಲಿಸದೆ ಅಂಗೀಕರಿಸಬಹುದು. ಆದುದರಿಂದ ವಿಧಾನ ಸಭೆಯ ಜೊತೆಗೆ ವಿಧಾನ ಪರಿಷತ್ತು ಇದ್ದರೆ ಅತುರದ ಕಾನೂನುಗಳನ್ನು ತಡೆಗಟ್ಟಬಹುದು.

**3) ಅನುಭವಿಗಳು ಮತ್ತು ಉತ್ತಮ ಸಂಸದೀಯ ಪಟುಗಳ ಆಯ್ಕೆಗೆ ಅವಕಾಶ:**

ಕೆಲವು ಬಾರಿ ರಾಜಕೀಯ, ಆಡಳಿತ ಅನುಭವ ಮತ್ತು ಸಾಮರ್ಥ್ಯಗಳನ್ನೂ ಹೊಂದಿರುವ ವ್ಯಕ್ತಿಗಳಿರುತ್ತಾರೆ. ಇವರು ಹಣವೇ ಪ್ರಧಾನವಾಗಿರುವ ನೈತಿಕ ಮೌಲ್ಯಗಳಿಲ್ಲದ ಚುನಾವಣೆಗಳಲ್ಲಿ ಸ್ಪರ್ಧಿಸಲು ಹಿಂಜರಿಯುತ್ತಾರೆ. ಆದುದರಿಂದ ಪ್ರತಿಭಾವಂತ ಜನರ ಅನನ್ಯ ಸೇವೆಯನ್ನು ಗುರುತಿಸಿ ಅಂತಹ ಗಣ್ಯವ್ಯಕ್ತಿಗಳನ್ನೂ ನಾಮಕರಣ ಮಾಡುವ ಮೂಲಕ ವಿಧಾನ ಪರಿಷತ್ತಿನ ಸದಸ್ಯರನ್ನಾಗಿ ನೇಮಕ ಮಾಡಿಕೊಳ್ಳಬಹುದು. ಹೀಗೆ ಮೇಲ್ಕಂಡ ಕಾರಣಗಳಿಂದಾಗಿ ವಿಧಾನ ಪರಿಷತ್ತು ಇರುವಿಕೆ ಅತ್ಯಗತ್ಯವಾಗಿದೆ. ಆದರೆ ಇತ್ತೀಚೆಗೆ ಚುನಾವಣೆಗಳಲ್ಲಿ ಸೋತ ಕೆಲವು ವ್ಯಕ್ತಿಗಳನ್ನು ಆಯ್ಕೆ ಮಾಡುವ ಮೂಲಕ ಅವರಿಗೆ ಹಿಂಬಾಗಿಲ ಪ್ರವೇಶ ನೀಡಲಾಗುತ್ತಿದೆ. ಎಂಬ ಅಪವಾದಗಳು ಕೇಳಿಬರುತ್ತಿವೆ. ಅಲ್ಲದೆ ವೆಚ್ಚದ ದೃಷ್ಟಿಕೋನದಿಂದ ಪರಿಶೀಲಿಸಿದರೆ ತುಂಬಾ ದುಬಾರಿಯಾಗುತ್ತಿದೆ. ಇತ್ಯಾದಿ ವಿರೋಧಿವಾದಗಳು ಹುಟ್ಟಿಕೊಂಡಿವೆ.

## ವಿಧಾನ ಸಭೆ (Legislative Assembly)

ಸಂವಿಧಾನದ 170 ನೇ ವಿಧಿಯು ಪ್ರತಿಯೊಂದು ರಾಜ್ಯದಲ್ಲಿಯೂ ಒಂದು ವಿಧಾನಸಭೆ ಇರಬೇಕೆಂದು ತಿಳಿಸುತ್ತದೆ. ವಿಧಾನಸಭೆಯು ರಾಜ್ಯಶಾಸಕಾಂಗದ ಕೆಳಸದನ ಈ ಸದನವು ಜನರಿಂದ ಚುನಾಯಿತರಾದ ಪ್ರತಿನಿಧಿಗಳನ್ನು ಒಳಗೊಂಡಿರುವುದರಿಂದ ಇದು

ಜನತಾ ಸಭೆಯಾಗಿದೆ. ವಿಧಾನ ಪರಿಷತ್ತಿಗಿಂತ ವಿಧಾನಸಭೆ ಹೆಚ್ಚಿನ ಅಧಿಕಾರವನ್ನು ಹೊಂದಿರುವ ಶಕ್ತಿಶಾಲಿ ಸದನವಾಗಿದೆ.

*ವಿಧಾನ ಸಭೆ ರಚನೆ:*

**1) ಗಾತ್ರ:**

ಪ್ರತಿಯೊಂದು ರಾಜ್ಯದ ವಿಧಾನಸಭೆಯ ಸದಸ್ಯರ ಸಂಖ್ಯೆಯು ಆಯಾ ರಾಜ್ಯದ ಜನಸಂಖ್ಯೆಯ ಪ್ರಮಾಣಕ್ಕನುಗುಣವಾಗಿ ಸಂವಿಧಾನದ 170 (1) ನೇ ವಿಧಿಯ ಪ್ರಕಾರ ವಿಧಾನಸಭಾ ಸದಸ್ಯರ ಸಂಖ್ಯೆ60 ಕ್ಕಿಂತ ಕಡಿಮೆಯಾಗದಂತೆ ಹಾಗೂ ಗರಿಷ್ಠ 500 ರ ಗಡಿ ಮೀರದಂತೆ ಇರಬೇಕೆಂದು ಸೂಚಿಸುತ್ತದೆ. ಇದಕ್ಕೆ ಅಪವಾದವೆಂಬಂತೆ ಪುದುಚೇರಿ ವಿಧಾನಸಭೆ ಸದಸ್ಯರ ಸಂಖ್ಯೆ30, ಸಿಕ್ಕಿಂ, ಗೋವಾ ಮತ್ತು ಮೀಜೋರಾಂಗಳ ವಿಧಾನ ಸಭೆ ಸದಸ್ಯರ ಸಂಖ್ಯೆ ತಲಾ 40 ರಷ್ಟಿದೆ. ಇದು ಏಕತೆ, ಪ್ರಾದೇಶಿಕತೆ ಮತ್ತು ಜನಸಂಖ್ಯೆಯ ಗಾತ್ರ ಕಡಿಮೆ ಇರುವುದನ್ನು ಗಮನಿಸಿ ವಿಶೇಷ ಅವಕಾಶ ಕಲ್ಪಿಸಿರುವುದು ಗಮನಾರ್ಹ. ರಾಜ್ಯದ ಪರಿಶಿಷ್ಟ ಜಾತಿ ಮತ್ತು ವರ್ಗದವರಿಗೆ ವಿಧಾನಸಭೆಯಲ್ಲಿ ಮೀಸಲಾತಿ ಅವಕಾಶ ನೀಡಲಾಗಿದೆ. ಹಾಗೆಯೇ ಆಂಗ್ಲೋ ಇಂಡಿಯನ್ ಸಮುದಾಯಕ್ಕೆ ರಾಜ್ಯಪಾಲರು ಒಬ್ಬರನ್ನು ನಾಮಕರಣ ಮಾಡಬಹುದು ಉತ್ತರ ಪ್ರದೇಶ ಗರಿಷ್ಠ 404 ಸದಸ್ಯರಿಂದ ಕೂಡಿದ ವಿಧಾನಸಭೆಯು ದೇಶದಲ್ಲಿಯೇ ಅತ್ಯಂತ ದೊಡ್ಡ ಗಾತ್ರದ ವಿಧಾನಸಭೆಯಾಗಿದೆ. ಕರ್ನಾಟಕದ ವಿಧಾನಸಭೆ ಸದಸ್ಯರ ಸಂಖ್ಯೆ224 ಮತ್ತು ಒಬ್ಬ ನಾಮಕರಣಗೊಂಡ ಸದಸ್ಯರನ್ನೊಳಗೊಂಡಿದೆ.

**2) ಅರ್ಹತೆಗಳು:**

ವಿಧಾನಸಭೆಯ ಸದಸ್ಯರಾಗುವವರು ಈ ಕೆಳಕಂಡ ಅರ್ಹತೆಗಳನ್ನು ಹೊಂದಿರಬೇಕು.

1. ಭಾರತದ ಪ್ರಜೆಯಾಗಿರಬೇಕು.
2. ಕನಿಷ್ಠ 25 ವರ್ಷ ವಯೋಮಿತಿ ಹೊಂದಿರಬೇಕು.
3. ಕೇಂದ್ರ ಮತ್ತು ರಾಜ್ಯ ಸರ್ಕಾರದ ಯಾವುದೇ ಲಾಭದಾಯಕ ಹುದ್ದೆಯಲ್ಲಿರಬಾರದು.
4. ಅಪರಾಧಿ, ದಿವಾಳಿ ಅಥವಾ ಮಾನಸಿಕ ಅಸ್ವಸ್ಥರಾಗಿರಬಾರದು.
5. ಸಂಸತ್ತು ಕಾಲಕಾಲಕ್ಕೆ ನಿಗದಿಪಡಿಸುವ ಎಲ್ಲಾ ಅರ್ಹತೆಗಳನ್ನೂ ಹೊಂದಿರಬೇಕು.

**3) ಅವಧಿ:**

ವಿಧಾನಸಭೆಯ ಅಧಿಕಾರವಧಿ ಐದು ವರ್ಷಗಳು. ಆದರೆ ಅಧಿಕಾರವಧಿಗೆ ಮೊದಲೇ ಮುಖ್ಯಮಂತ್ರಿಯ ಸಲಹೆ ಮೇರೆಗೆ ರಾಜ್ಯಪಾಲರು ವಿಧಾನಸಭೆಯನ್ನು ವಿಸರ್ಜಿಸಬಹುದು. ರಾಷ್ಟ್ರೀಯ ತುರ್ತು ಪರಿಸ್ಥಿತಿ ಜಾರಿಯಲ್ಲಿರುವ ಸಂದರ್ಭದಲ್ಲಿ ವಿಧಾನಸಭೆಯ ಅವಧಿಯನ್ನು ಒಂದು ವರ್ಷದವರೆಗೆ ವಿಸ್ತರಿಸುವ ಅಧಿಕಾರ ಸಂಸತ್ತಿಗಿದೆ.

**4) ಅಧಿವೇಶನಗಳು:**

ವಿಧಾನಸಭೆಯ ಅಧಿವೇಶನವನ್ನು ಕರೆಯುವ ಅಧಿಕಾರ ರಾಜ್ಯಪಾಲರಿಗಿದೆ. ವರ್ಷಕ್ಕೆ ಮೂರು ಬಾರಿ ಅಧಿವೇಶನ ಕರೆಯುತ್ತಾರೆ, ಎರಡು ಅಧಿವೇಶಗಳ ನಡುವಿನ ಅಂತರ ಆರು ತಿಂಗಳು ಮೀರುವಂತಿಲ್ಲ. 1/ 10 ಸಂಖ್ಯೆಯ ಸದಸ್ಯರ ಕೋರಿಕೆಯ ಮೇರೆಗೆ ರಾಜ್ಯಪಾಲರು ವಿಶೇಷ ಅಧಿವೇಶನವನ್ನು ಕರೆಯಬಹುದು.

**5) ಕೋರಂ:**

ವಿಧಾನಸಭೆಯ ಒಟ್ಟು ಸದಸ್ಯರ 1/ 10 ರಷ್ಟು ಸದಸ್ಯರು ವಿಧಾನಸಭೆಯ ಕಾರ್ಯ ಕಲಾಪಗಳು ನಡೆಯುವ ಸಂದರ್ಭದಲ್ಲಿ ಹಾಜರಿಬೇಕು, ಇಲ್ಲದಿದ್ದ ಸಂದರ್ಭದಲ್ಲಿ ಸಭಾಧ್ಯಕ್ಷರು ಕಾರ್ಯಕಲಾಪಗಳನ್ನು ಮುಂದೂಡುತ್ತಾರೆ.

**6) ಸಭಾಪತಿ ಮತ್ತು ಉಪಸಭಾಪತಿ:**

ರಾಜ್ಯ ವಿಧಾನಸಭೆಯ ಸದಸ್ಯರು ಮೊದಲ ಅಧಿವೇಶನದಲ್ಲಿ ತಮ್ಮಲ್ಲಿಯೇ ಒಬ್ಬರನ್ನು ಸಭಾಪತಿಯನ್ನಾಗಿ ಮೊತ್ತಬ್ಬರನ್ನು ಉಪಸಭಾಪತಿಯನ್ನಾಗಿ ಆಯ್ಕೆ ಮಾಡಿಕೊಳ್ಳುತ್ತಾರೆ. ಸಭಾಪತಿಗಳ ಗೈರು ಹಾಜರಿಯಲ್ಲಿ ಉಪಸಭಾಪತಿಯವರು ಅವರ ಎಲ್ಲಾ ಕಾರ್ಯಕಲಾಪಗಳನ್ನು ನಿರ್ವಹಿಸುತ್ತಾರೆ.

**7) ವೇತನ ಮತ್ತು ಸೌಲಭ್ಯಗಳು:**

ವಿಧಾನಸಭೆಯ ಸದಸ್ಯರ ವೇತನ ಮತ್ತು ಸೌಲಭಗಳನ್ನು ರಾಜ್ಯ ಶಾಸಕಾಂಗವು ಕಾಲಕಾಲಕ್ಕೆ ನಿರ್ಧರಿಸುತ್ತದೆ. ವಿಧಾನಸಭಾ ಸದಸ್ಯರುಗಳಿಗೆ ಉಚಿತ ದೂರವಾಣಿ, ಪ್ರಯಾಣಭತ್ಯೆ, ವೇತನ, ನಿವೃತ್ತಿ ವೇತನ ಮುಂತಾದ ಸೌಲಭ್ಯಗಳನ್ನು ಒದಗಿಸಲಾಗುತ್ತದೆ. ಸದಸ್ಯರು ವಾಕ್ ಮತ್ತು ಅಭಿವ್ಯಕ್ತಿ ಸ್ವಾತಂತ್ರ್ಯವನ್ನು ಹೊಂದಿದ್ದಾರೆ. ಸದನದಲ್ಲಿನ ಸದಸ್ಯರ ಭಾಷಣ, ಚರ್ಚೆ, ಮಾತು ಹಾಗೂ ವರ್ತನೆಗಳನ್ನು ನ್ಯಾಯಾಲಯದಲ್ಲಿ ಪ್ರಶ್ನಿಸುವಂತಿಲ್ಲ.

**8) ವಿಧಾನಸಭೆ ವಿಸರ್ಜನೆ:**

ರಾಜ್ಯಪಾಲರು ಈ ಕೆಳಕಂಡ 3 ಸಂದರ್ಭಗಳಲ್ಲಿ ವಿಧಾನಸಭೆಯನ್ನು ವಿಸರ್ಜಿಸಬಹುದು.

1. ಸರ್ಕಾರ ಬಹುಮತ ಕಳೆದುಕೊಂಡ ಸಂದರ್ಭದಲ್ಲಿ.
2. ಮುಖ್ಯಮಂತ್ರಿಯು ಶಿಫಾರಸ್ಸು ಮಾಡಿದಾಗ.
3. ಯಾವ ಪಕ್ಷವು ಸರ್ಕಾರ ರಚಿಸಲು ಮುಂದೆ ಬರದಿದ್ದಾಗ ಹಾಗೂ ಸಂವಿಧಾನಾತ್ಮಕ ಬಿಕ್ಕಟ್ಟು ಉಂಟಾದಾಗ

ಈ ಮೇಲಿನ ಮೂರು ಸಂದರ್ಭಗಳಲ್ಲಿ ಕೇಂದ್ರದೊಂದಿಗೆ ಸಮಾಲೋಚಿಸಿ ವಿಧಾನಸಭೆಯನ್ನು ವಿಸರ್ಜಿಸಲು ರಾಜ್ಯಪಾಲರಿಗೆ ಅವಕಾಶವಿದೆ.

## ವಿಧಾನಸಭೆಯ ಅಧಿಕಾರ ಮತ್ತು ಕಾರ್ಯಗಳು:

ವಿಧಾನಸಭೆಯ ಅಧಿಕಾರ ಮತ್ತು ಕಾರ್ಯಗಳು ಲೋಕಸಭೆಯ ಅಧಿಕಾರ ಮತ್ತು ಕಾರ್ಯಗಳನ್ನು ಹೋಲುತ್ತವೆ. ಅವುಗಳೆಂದರೆ.

### 1) ಶಾಸನೀಯ ಅಧಿಕಾರ ಮತ್ತು ಕಾರ್ಯಗಳು:

1. ವಿಧಾನಸಭೆಯು ಸಂವಿಧಾನದಲ್ಲಿ ನಮೂದಿಸಲ್ಪಟ್ಟಿರುವ ರಾಜ್ಯಪಟ್ಟಿಯಲ್ಲಿರುವ ಗೃಹ, ಕೃಷಿ, ಆರೋಗ್ಯ, ಸ್ಥಳೀಯ ಸಂಸ್ಥೆಗಳು ಮಂತಾದ ವಿಷಯಗಳಿಗೆ ಸಂಬಂಧಿಸಿದಂತೆ ಕಾನೂನುಗಳನ್ನು ಮಾಡುತ್ತದೆ.
2. ವಿಧಾನಸಭೆಯು ಸಮವರ್ತಿ ಪಟ್ಟಿಯಲ್ಲಿರುವ ಅಪರಾಧ ದಂಡ ಸಂಹಿತೆ, ನಾಗರೀಕ ದಂಡ ಸಂಹಿತೆ, ವಿವಾಹ ಮತ್ತು ವಿವಾಹ ವಿಚ್ಛೇದನ, ಅರಣ್ಯ, ಆರ್ಥಿಕ ಮತ್ತು ಸಾಮಾಜಿಕ ಯೋಜನೆಗಳು ಮುಂತಾದ ವಿಷಯಗಳಿಗೆ ಸಂಬಂದಿಸಿದಂತೆ ಕಾನೂನುಗಳನ್ನು ಮಾಡುವ ಅಧಿಕಾರ ಹೊಂದಿದೆ. ಆದರೆ ಸಮವರ್ತಿ ಪಟ್ಟಿಯಲ್ಲಿ ಬರುವ ಒಂದೇ ವಿಷಯದ ಮೇಲೆ ರಾಜ್ಯ ಹಾಗೂ ಕೇಂದ್ರ ಸರ್ಕಾರಗಳೆರಡು ಕಾನೂನು ರಚಿಸಿದಾಗ ಅವುಗಳ ನಡುವೆ ಸಂಘರ್ಷ ಏರ್ಪಟ್ಟರೆ ಅಂತೀಮವಾಗಿ ಕೇಂದ್ರ ಸರ್ಕಾರ ರಚಿಸಿದ ಕಾನೂನು ಜಾರಿಗೆ ಬರುತ್ತದೆ.
3. ದ್ವಿಸದನ ಶಾಸಕಾಂಗ ಪದ್ಧತಿ ಜಾರಿಯಲ್ಲಿರುವ ರಾಜ್ಯ ವಿಧಾನಸಭೆಯಲ್ಲಿ ಮಸೂದೆಯನ್ನು ಅಂಗೀಕರಿಸಿ ಒಪ್ಪಿಗೆಗಾಗಿ ವಿಧಾನಪರಿಷತ್‌ಗೆ ಕಳುಹಿಸಲಾಗುತ್ತದೆ. ಇಲ್ಲಿಯೂ ಮಸೂದೆಗೆ ಒಪ್ಪಿಗೆ ಸಿಕ್ಕಿದ ನಂತರ ರಾಜ್ಯಪಾಲರ ಅನುಮತಿಗಾಗಿ ಕಳುಹಿಸಲಾಗುತ್ತದೆ.

### 2) ಕಾರ್ಯಾಂಗೀಯ ಅಧಿಕಾರ ಮತ್ತು ಕಾರ್ಯಗಳು:

1. ಮಂತ್ರಿಮಂಡಲವು ವಿಧಾನಭೆಯ ವಿಶ್ವಾಸವಿರುವವರೆಗೆ ಮಾತ್ರ ಅಧಿಕಾರದಲ್ಲಿ ಮುಂದುವರೆಯುತ್ತದೆ.
2. ಕಾರ್ಯಾಂಗವು ರಾಜ್ಯದ ಜನರ ಹಿತಾಸಕ್ತಿಗಳನ್ನು ಈಡೇರಿಸುವಲ್ಲಿ ವಿಫಲವಾದರೆ ಅಥವಾ ನೀಡಲು ವಿಫಲವಾದರೆ ವಿಧಾನಸಭೆಯು ಅವಿಶ್ವಾಸ ನಿರ್ಣಯವನ್ನು ಮಂಡಿಸಿ ಅಧಿಕಾರಿಂದ ಕೆಳಗಿಳಿಸಬಹುದು.
3. ಅಧಿವೇಶನ ನಡೆಯುತ್ತಿರುವ ಸಂದರ್ಭದಲ್ಲಿ ವಿಧಾನಸಭಾ ಸದಸ್ಯರು ಮಂತ್ರಿಗಳಿಗೆ ಪ್ರಶ್ನೆಯನ್ನು ಕೇಳುವ ಮೂಲಕ, ಗಮನ ಸೆಳೆಯುವ ಸೂಚನೆಗಳ ಮೂಲಕ, ನಿಲುವಳಿ ಸೂಚನೆಗಳ ಮೂಲಕ ಕಾರ್ಯಾಂಗವನ್ನು ನಿಯಂತ್ರಿಸಬಹುದು.

### 3) ಹಣಕಾಸಿನ ಅಧಿಕಾರ ಮತ್ತು ಕಾರ್ಯಗಳು:

1. ರಾಜ್ಯ ವಿಧಾನಸಭೆಯ ಹಣಕಾಸಿನ ಅಧಿಕಾರದಲ್ಲಿ ಸಂಪೂರ್ಣ ಅಧಿಕಾರವನ್ನು ಹೊಂದಿದೆ. ಹಣಕಾಸು ಮಸೂದೆಯನ್ನು ಮೊದಲು ವಿಧಾನ ಸಭೆಯಲ್ಲಿಯೇ ಮಂಡಿಸಬೇಕು.

2. ಹಣಕಾಸು ಮಸೂದೆಯನ್ನು ಚರ್ಚಿಸಿ ಅಂಗೀಕರಿಸಿ ವಿಧಾನ ಪರಿಷತ್ತಿಗೆ ಕಳುಹಿಸಬೇಕು. ವಿಧಾನ ಪರಿಷತ್ತು ತನ್ನ ಸಲಹೆಗಳೊಂದಿಗೆ 14 ದಿನಗಳೊಳಗಾಗಿ ವಿದಾನಸಭೆಗೆ ವಾಪಸ್ಸು ಕಳುಹಿಸಬೇಕು. ಇಲ್ಲದಿದ್ದಲ್ಲಿ ಎರಡು ಸದನಗಳಿಂದ ಅನುಮೋದನಗೊಂಡಿದೆ ಎಂದು ವಿಧಾನಸಭೆಯು ಪರಿಗಣಿಸುತ್ತದೆ.
3. ರಾಜ್ಯ ಸರ್ಕಾರವು ಯಾವುದೇ ಹೊಸ ತೆರಿಗೆಗಳನ್ನು ವಿಧಿಸಲು, ಹಣ ಖರ್ಚು ಮಾಡಲು ವಿಧಾನಸಭೆಯ ಅನುಮೋದನೆ ಅತ್ಯಗತ್ಯ.
4. ವಾರ್ಷಿಕ ಆಯವ್ಯಯ ಪಟ್ಟಿಗೆ ವಿಧಾನಸಭೆಯು ಅಂಗೀಕಾರ ನೀಡದಿದ್ದರೆ ರಾಜ್ಯ ಸರ್ಕಾರ ಅಧಿಕಾರ ಕಳೆದುಕೊಳ್ಳಬೇಕಾಗುತ್ತದೆ.

**4) ಚುನಾವಣಾ ಅಧಿಕಾರ ಮತ್ತು ಕಾರ್ಯಗಳು:**

1. ರಾಷ್ಟ್ರಪತಿಯವರ ಚುನಾವಣೆಯಲ್ಲಿ ರಾಜ್ಯ ವಿಧಾನಸಭೆಯ ಚುಣಾಯಿತ ಸದಸ್ಯರುಗಳು ಭಾಗವಹಿಸುತ್ತಾರೆ.
2. ಸಭಾಪತಿ ಮತ್ತು ಉಪಸಭಾಪತಿಗಳನ್ನು ಚುನಾಯಿಸುತ್ತಾರೆ.
3. ವಿಧಾನಪರಿಷತ್ತಿನ 1\ 3 ರಷ್ಟು ಸದಸ್ಯರನ್ನು ಚುನಾಯಿಸುತ್ತಾರೆ.
4. ರಾಜ್ಯಸಭಾ ಸದಸ್ಯರನ್ನು ಚುನಾಯಿಸುತ್ತಾರೆ.

**5) ಸಂವಿಧಾನಾತ್ಮಕ ಅಧಿಕಾರ ಮತ್ತು ಕಾರ್ಯಗಳು:**

ಸಂವಿಧಾನದ ತಿದ್ದುಪಡಿ ವಿಷಯದಲ್ಲಿ ವಿಧಾನಸಭೆಯ ಪಾತ್ರ ಮಹತ್ವದ್ದಾಗಿರುತ್ತದೆ. ಸಂಸತ್ತು ಸಂವಿಧಾನದ ಕೆಲವು ಪ್ರಮುಖ ವಿಷಯಗಳನ್ನು ತಿದ್ದುಪಡಿ ಮಾಡಲು ಮಸೂದೆಯನ್ನು ಅಂಗೀಕರಿಸುವ ಸಂದರ್ಭದಲ್ಲಿ ಒಟ್ಟು ರಾಜ್ಯಗಳಲ್ಲಿ ಅರ್ಧದಷ್ಟು ರಾಜ್ಯಗಳ ವಿಧಾನಸಭೆಗಳು ತಮ್ಮ ಸಮ್ಮತಿ ನೀಡಬೇಕು ಉದಾಹರಣೆಗೆ ರಾಷ್ಟ್ರಪತಿಗಳ ಚುನಾವಣೆ, ಕೇಂದ್ರ ಮತ್ತು ರಾಜ್ಯಗಳ ಸಂಬಂಧಗಳು ಇತ್ಯಾದಿ.

**6) ಸಾರ್ವಜನಿಕ ಕುಂದುಕೊರತೆಗಳ ನಿವಾರಣೆ:**

ವಿಧಾನಸಭಾ ಸದಸ್ಯರುಗಳು ರಾಜ್ಯದ ವಿವಿಧ ಕ್ಷೇತ್ರಗಳಿಂದ ಚುನಾಯಿತರಾಗುತ್ತಾರೆ. ಇವರು ತಮ್ಮ ಕ್ಷೇತ್ರದ ಜನತೆಯ ಕುಂದುಕೊರತೆಗಳನ್ನು ಸದನದಲ್ಲಿ ಧ್ವನಿ ಎತ್ತುವ ಮೂಲಕ ಸರ್ಕಾರದ ಗಮನಕ್ಕೆ ತರುತ್ತಾರೆ. ಮತ್ತು ಪರಿಹಾರಕ್ಕಾಗಿ ಒತ್ತಾಯಿಸುತ್ತಾರೆ. ಒಟ್ಟಿನಲ್ಲಿ ವಿಧಾನಮಂಡಲದ ಉಭಯ ಸದನಗಳಲ್ಲಿ ಕೆಳಸದನವಾದ ವಿಧಾನಸಭೆಯೂ ಹೆಚ್ಚು ಪ್ರಭಾವಶಾಲಿ ಸದನವಾಗಿದೆ ಎಂದು ಹೇಳಬಹುದು.

**ವಿಧಾನಸಭೆಯ ಸಭಾಧ್ಯಕ್ಷರು** (Speaker)

ಸಂವಿಧಾನದ 178 ನೇ ವಿಧಿಯು ಸಭಾಧ್ಯಕ್ಷರ ಸ್ಥಾನಕ್ಕೆ ಅವಕಾಶ ಕಲ್ಪಿಸಿದೆ. ವಿಧಾನಸಭೆಯ ಸದಸ್ಯರು ಮೊದಲನೆಯ ಅಧಿವೇಶನದಲ್ಲಿ ತಮ್ಮಲ್ಲಿಯೇ ಒಬ್ಬರನ್ನು ಸಭಾಧ್ಯಕ್ಷರನ್ನಾಗಿ ಆಯ್ಕೆ ಮಾಡುತ್ತಾರೆ. ಸಭಾಧ್ಯಕ್ಷರಾಗಿ ಆಯ್ಕೆಯಾದ ನಂತರ ಪಕ್ಷಾತೀತ

ವ್ಯಕ್ತಿಯಾಗಿ ಕಾರ್ಯನಿರ್ವಹಿಸಬೇಕಾಗುತ್ತದೆ. ಸಂವಿಧಾನದ ವಿಧಿ ವಿಧಾನಗಳಿಗೆ ವಿರುದ್ಧವಾಗಿ ಸಭಾಧ್ಯಕ್ಷರು ವರ್ತಿಸಿದಾಗ ವಿಧಾನಸಭಾ ಸದಸ್ಯರು ಇವರನ್ನು ಪದಚ್ಯುತಿಗೊಳಿಸಬಹುದು.

## ಸಭಾಧ್ಯಕ್ಷರ ಅಧಿಕಾರ ಮತ್ತು ಕಾರ್ಯಗಳು:

1. ವಿಧಾನಸಭೆಯ ಅಧ್ಯಕ್ಷತೆ ವಹಿಸಿ ಸದನದ ಕಾರ್ಯಕಲಾಪಗಳನ್ನು ಸುಸೂತ್ರವಾಗಿ ನಡೆಸುವುದು.
2. ಸದನದಲ್ಲಿ ಗಲಭೆ, ದುರ್ವರ್ತನೆ ಹಾಗೂ ಅಸಂಸದೀಯ ನಡವಳಿಕೆಯನ್ನು ನಿಯಂತ್ರಿಸುವುದರೊಂದಿಗೆ ಶಾಂತಿ ಮತ್ತು ಶಿಸ್ತನ್ನು ಕಾಪಾಡುವುದು.
3. ಸದನದ ಘನತೆ ಮತ್ತು ಗೌರವಗಳನ್ನು ಕಾಪಾಡಿಕೊಂಡು ಬರುವುದು.
4. ಸದನವನ್ನು ತಾತ್ಕಾಲಿಕವಾಗಿ ಮುಂದೂಡುವುದು ಅಥವಾ ರದ್ದುಪಡಿಸುವುದು.
5. ಸಭಾಧ್ಯಕ್ಷರಿಗೆ ಅಥವಾ ಸಭೆಗೆ ಗೌರವ ನೀಡದ ಸದಸ್ಯರ ವಿರುದ್ಧ ಕ್ರಮ ಜರುಗಿಸುವುದು.
6. ಸದನದಲ್ಲಿ ಮಸೂದೆಗಳನ್ನು ಮಂಡಿಸಿದಾಗ ಅದು ಹಣಕಾಸಿನ ಮಸೂದೆ ಅಥವಾ ಇತರ ಮಸೂದೆ ಎಂಬುದನ್ನು ನಿರ್ಧರಿಸುವುದು.
7. ಒಂದು ಮಸೂದೆಯ ಅಂಗೀಕಾರದ ಬಗ್ಗೆ ಮತಕ್ಕೆ ಹಾಕಿದಾಗ ಸಮಪ್ರಮಾಣದ ಮತಗಳು ಬಂದರೆ ಆಗ ಸಭಾಧ್ಯಕ್ಷರು ತಮ್ಮ ನಿರ್ಣಾಯಕ ಮತ ಚಲಾಯಿಸುತ್ತಾರೆ.

## ಉಪಸಭಾಧ್ಯಕ್ಷರು:

ಪ್ರಥಮ ಅಧಿವೇಶನದಲ್ಲಿಯೇ ವಿಧಾನಸಭೆಯ ಸದಸ್ಯರು ತಮ್ಮಲ್ಲಿಯೇ ಒಬ್ಬರನ್ನು ಉಪಸಭಾಧ್ಯಕ್ಷರನ್ನಾಗಿ ಆಯ್ಕೆ ಮಾಡಿಕೊಳ್ಳುತ್ತಾರೆ. ಉಪಸಭಾಧ್ಯಕ್ಷರು ಸಭಾಧ್ಯಕ್ಷರ ಗೈರುಹಾಜರಿಯಲ್ಲಿ ಅವರ ಎಲ್ಲ ಕಾರ್ಯಕಲಾಪಗಳನ್ನು ನಿರ್ವಹಿಸುತ್ತಾರೆ. ಬೇರೆ ಸಂದರ್ಭದಲ್ಲಿ ಇತರ ಸದಸ್ಯರಂತೆ ಸದನದ ಕಾರ್ಯ ಕಲಾಪಗಳಲ್ಲಿ ಸಕ್ರಿಯವಾಗಿ ಭಾಗವಹಿಸುತ್ತಾರೆ.

## ಅಭ್ಯಾಸ

**I. ಒಂದು ವಾಕ್ಯದಲ್ಲಿ ಉತ್ತರಿಸಿ.**

1. ವಿಧಾನ ಮಂಡಲದ ಮೇಲ್ಮನೆಯನ್ನು ಏನೆಂದು ಕರೆಯುತ್ತಾರೆ?
2. ವಿಧಾನ ಸಭೆಯ ಅಧಿವೇಶನವನ್ನು ಯಾರು ಕರೆಯುತ್ತಾರೆ?
3. ವಿಧಾನ ಸಭೆಯ ಅಧ್ಯಕ್ಷತೆಯನ್ನು ಯಾರು ವಹಿಸುತ್ತಾರೆ?
4. ವಿಧಾನ ಮಂಡಲ ಎಂದರೇನು?

**II. ಬಿಟ್ಟ ಸ್ಥಳದಲ್ಲಿ ಸೂಕ್ತ ಪದವನ್ನು ತುಂಬಿರಿ.**

1. ರಾಜ್ಯ ಶಾಸಕಾಂಗ ಜಂಟಿ ಅಧಿವೇಶನವನ್ನು ಉದ್ದೇಶಿಸಿ ಭಾಷಣ ಮಾಡುವವರು ________.
2. ರಾಜ್ಯ ಶಾಸಕಾಂಗದ ಶಾಶ್ವತ ಮನೆ ________.

## III. ಸರಿಯಾದ ಉತ್ತರಗಳನ್ನು ಆರಿಸಿ ಉತ್ತರ ಸೂಚಿಯಲ್ಲಿ ಗುರುತಿಸಿ.

1. ಈ ಕೆಳಗಿನ ಯಾವ ರಾಜ್ಯದಲ್ಲಿ ವಿಧಾನ ಪರಿಷತ್ತು ಇರುತ್ತದೆ?
   ಎ) ಕರ್ನಾಟಕ
   ಬಿ) ಕೇರಳ
   ಸಿ) ತಮಿಳುನಾಡು
   ಡಿ) ಗೋವಾ
2. ರಾಜ್ಯ ಶಾಸಕಾಂಗದ ಕೆಳಮನೆಯ ಅಧಿಕಾರವಧಿ
   ಎ) 3 ವರ್ಷಗಳು
   ಬಿ) 4 ವರ್ಷಗಳು
   ಸಿ) 5 ವರ್ಷಗಳು
   ಡಿ) 6 ವರ್ಷಗಳು
3. ವಿಧಾನ ಪರಿಷತ್ತಿನ ಸದಸ್ಯರ ಅಧಿಕಾರವಧಿ
   ಎ) 4 ವರ್ಷಗಳು
   ಬಿ) 5 ವರ್ಷಗಳು
   ಸಿ) 6 ವರ್ಷಗಳು
   ಡಿ) ಮೇಲಿನ ಯಾವುದು ಇಲ್ಲ
4. ಎರಡು ಅಧೀವೇಶನಗಳ ನಡುವಿನ ಅಂತರ ಅವಧಿಯನ್ನು ಮೀರುವಂತಿಲ್ಲ.
   ಎ) 4 ತಿಂಗಳು
   ಬಿ) 5 ತಿಂಗಳು
   ಸಿ) 6 ತಿಂಗಳು
   ಡಿ) 7 ತಿಂಗಳು
5. ಹಣಕಾಸಿನ ಮಸೂದೆಯನ್ನು ವಿಧಾನಪರಿಷತ್ತು ತಡೆಹಿಡಿಯಬಹುದಾದ ಅವಧಿ.
   ಎ) 15 ದಿನಗಳು
   ಬಿ) 13 ದಿನಗಳು
   ಸಿ) 10 ದಿನಗಳು
   ಡಿ) 14 ದಿನಗಳು
6. ರಾಜ್ಯ ಸರ್ಕಾರವನ್ನು ವಜಾ ಮಾಡುವಂತೆ ರಾಷ್ಟ್ರಪತಿಗಳಿಗೆ ಶಿಪಾರಸ್ಸು ಮಾಡುವವರು.
   ಎ) ಮುಖ್ಯಮಂತ್ರಿಗಳು
   ಬಿ) ರಾಜ್ಯಪಾಲರು
   ಸಿ) ಪ್ರಧಾನ ಮಂತ್ರಿಗಳು
   ಡಿ) ಉಪರಾಷ್ಟ್ರಪತಿ

IV. **ಎರಡು ಅಥವಾ ಮೂರು ವಾಕ್ಯಗಳಲ್ಲಿ ಉತ್ತರಿಸಿ.**

1. ವಿಧಾನ ಪರಿಷತ್ತಿಗೆ ಸದಸ್ಯರಾಗಿ ಆಯ್ಕೆಯಾಗಲು ಯಾವ ಅರ್ಹತೆಗಳನ್ನು ಹೊಂದಿರಬೇಕು?
2. ವಿಧಾನ ಸಭೆಯ ಸದಸ್ಯರಾಗುವವರು ಯಾವ ಅರ್ಹತೆಗಳನ್ನು ಹೊಂದಿರಬೇಕು?
3. ವಿಧಾನ ಪರಿಷತ್ತು ಹೇಗೆ ಉಪಯುಕ್ತವಾಗಿದೆ?

V. **ನಾಲ್ಕು ಅಥವಾ ಐದು ವಾಕ್ಯದಲ್ಲಿ ಉತ್ತರಿಸಿ.**

1. ವಿಧಾನ ಪರಿಷತ್ತಿನ ರಚನಾ ವಿಧಾನವನ್ನು ತಿಳಿಸಿ.
2. ವಿಧಾನ ಪರಿಷತ್ತಿನ ಅಧಿಕಾರ ಮತ್ತು ಕಾರ್ಯಗಳನ್ನು ವಿವರಿಸಿ.
3. ವಿಧಾನ ಪರಿಷತ್ತಿನ ಅಗತ್ಯತೆ ಕುರಿತು ಟಿಪ್ಪಣಿ ಬರೆಯಿರಿ.
4. ವಿಧಾನ ಸಭೆಯ ರಚನೆ ಕುರಿತು ಬರೆಯಿರಿ.
5. ವಿಧಾನ ಸಭೆಯ ಅಧಿಕಾರ ಮತ್ತು ಕಾರ್ಯಗಳನ್ನು ವಿವರಿಸಿ.
6. ವಿಧಾನ ಸಭೆಯ ಸಭಾಧ್ಯಕ್ಷರ ಅಧಿಕಾರ ಮತ್ತು ಕಾರ್ಯಗಳನ್ನು ವಿವರಿಸಿ.

**ಸಲಹಾತ್ಮಕ ಚಟುವಟಿಕೆಗಳು:**

1. ನಿಲುವಳಿ ಸೂಚನೆ, ಪ್ರಶ್ನೋತ್ತರ ಸಮಯ, ಶೂನ್ಯ ವೇಳೆ ಮುಂತಾದ ಸರ್ಕಾರದ ಮೇಲಿನ ಶಾಸಕಾಂಗದ ನಿಯಂತ್ರಣಗಳ ಬಗ್ಗೆ ಬರೆಯಿರಿ.
2. ದ್ವಿಸದನ ಶಾಸಕಾಂಗವನ್ನು ಹೊಂದಿರುವ ರಾಜ್ಯಗಳನ್ನು ಪಟ್ಟಿ ಮಾಡಿ.
3. ವಿಧಾನಸಭಾ ಮತ್ತು ವಿಧಾನ ಪರಿಷತ್ತಿನ ಸಭಾಪತಿಗಳ ಪಾತ್ರವನ್ನು ಕುರಿತು ಟಿಪ್ಪಣಿ ಬರೆಯಿರಿ.
4. ಅಣುಕು ವಿಧಾನಸಭೆ ಕಾರ್ಯಕಲಾಪಗಳನ್ನು ನಡೆಸುವುದು.

# ಅಧ್ಯಾಯ- 10 ಉಚ್ಚ ನ್ಯಾಯಾಲಯ (HIGH COURT)

## ಕಲಿಕಾ ಉದ್ದೇಶಗಳು:

1. ರಾಜ್ಯ ನ್ಯಾಯಾಂಗದ ಮಹತ್ವದ ಬಗ್ಗೆ ತಿಳಿಯುವುದು.
2. ಉಚ್ಚ ನ್ಯಾಯಾಲಯದ ನ್ಯಾಯಧೀಶರ ಆಯ್ಕೆ ಮತ್ತು ಆಧಿಕಾರವಧಿಯ ಬಗ್ಗೆ ಅರಿಯುವುದು.
3. ಉಚ್ಚ ನ್ಯಾಯಾಲಯದ ಅಧಿಕಾರ ಮತ್ತು ಕಾರ್ಯಗಳ ಬಗ್ಗೆ ತಿಳುವಳಿಕೆ ಮೂಡಿಸುವುದು.
4. ವಿವಿಧ ನ್ಯಾಯಾಲಯಗಳ ಬಗ್ಗೆ ತಿಳಿಸುವುದು.

"ಸರ್ಕಾರದ ಗುಣಮಟ್ಟವನ್ನು ಅಳೆಯಲು ನ್ಯಾಯಾಂಗದ ದಕ್ಷತೆಗಿಂತ ಬೇರೊಂದು ಅಳತೆಗೋಲಿಲ್ಲ" **ಲಾರ್ಡ್ ಬ್ರೈಸ್.**

ಭಾರತದಲ್ಲಿ ಏಕೀಕೃತ ನ್ಯಾಯಾಂಗ ವ್ಯವಸ್ಥೆ ಇದೆ ಎಂಬುದನ್ನು ಈಗಾಗಲೇ ತಿಳಿದುಕೊಂಡಿದ್ದೇವೆ. ಕೇಂದ್ರದಲ್ಲಿ ಸರ್ವೋಚ್ಚ ನ್ಯಾಯಾಲಯ ಇರುವಂತೆ ರಾಜ್ಯಗಳಲ್ಲಿ ಉಚ್ಚ ನ್ಯಾಯಾಲಯ ಇರಬೇಕೆಂದು ಸಂವಿಧಾನದ 214 ನೇ ವಿಧಿ ತಿಳಿಸುತ್ತದೆ. ಉಚ್ಚ ನ್ಯಾಯಾಲಯವು ಸರ್ವೋಚ್ಚ ನ್ಯಾಯಾಲಯಕ್ಕೆ ಅಧೀನವಾಗಿರುತ್ತದೆ.

ರಾಜ್ಯದ ಏಕೀಕೃತ ನ್ಯಾಯಾಂಗ ವ್ಯವಸ್ಥೆಯಲ್ಲಿ ಉಚ್ಚ ನ್ಯಾಯಾಲಯವು ಉನ್ನತ ಸ್ಥಾನದಲ್ಲಿದೆ. ಎರಡು ಅಥವಾ ಎರಡಕ್ಕಿಂತ ಹೆಚ್ಚು ರಾಜ್ಯಗಳಿಗೆ ಸೇರಿ ಒಂದು ಉಚ್ಚನ್ಯಾಯಾಲಯವನ್ನು ರಚಿಸಲು ಸಂವಿಧಾನದ ಪ್ರಕಾರ ಸಂಸತ್ತಿಗೆ ಅಧಿಕಾರವಿದೆ. (231 ನೇ ವಿಧಿ) ಉದಾಹರಣೆಗಾಗಿ ಅಸ್ಸಾಂ, ನಾಗಾಲಾಂಡ್, ಮಣಿಪುರ, ಮೇಘಾಲಯ ಮತ್ತು ತ್ರಿಪುರ ಈ ರಾಜ್ಯಗಳಿಗೆ ಸೇರಿ ಅಸ್ಸಾಂನ ಗೌಹತಿಯಲ್ಲಿ ಒಂದೇ ಒಂದು ಉಚ್ಚ ನ್ಯಾಯಾಲಯವಿರುವುದು ಗಮನಾರ್ಹ.

## ಉಚ್ಚ ನ್ಯಾಯಾಲಯ ರಚನೆ:

**1) ಗಾತ್ರ:** ಪ್ರತಿಯೊಂದು ರಾಜ್ಯದ ಉಚ್ಚ ನ್ಯಾಯಾಲಯದಲ್ಲಿ ಓರ್ವ ಮುಖ್ಯ ನ್ಯಾಯಾಧೀಶರು ಮತ್ತು ಇತರ ನ್ಯಾಯಾಧೀಶರು ಇರುತ್ತಾರೆ. ನ್ಯಾಯಾಧೀಶರ ಸಂಖ್ಯೆಯನ್ನು ರಾಷ್ಟ್ರಪತಿಗಳು ಅವಶ್ಯಕತೆಗೆ ತಕ್ಕಂತೆ ಹೆಚ್ಚಿಸುವ ಅಧಿಕಾರವನ್ನು ಹೊಂದಿರುತ್ತಾರೆ.

ಉದಾಹರಣೆ: ಕರ್ನಾಟಕದ ಉಚ್ಚನ್ಯಾಯಾಲಯದ ಒಟ್ಟು ನ್ಯಾಯಾಧೀಶರ ಸಂಖ್ಯೆ 50.

**2) ನೇಮಕ:** ಉಚ್ಚ ನ್ಯಾಯಲಯದ ಮುಖ್ಯ ನ್ಯಾಯಾಧೀಶರನ್ನು ಮತ್ತು ಇತರ ನ್ಯಾಯಾಧೀಶರನ್ನು, ರಾಷ್ಟ್ರಪತಿಗಳು ನೇಮಕ ಮಾಡುತ್ತಾರೆ. ಇತರ ನ್ಯಾಯಾಧೀಶರನ್ನು ನೇಮಕ ಮಾಡುವಾಗ ಸರ್ವೋಚ್ಚ ನ್ಯಾಯಾಲಯದ ಮುಖ್ಯ ನ್ಯಾಯಾಧೀಶರ ಸಲಹೆ

ಪಡೆಯುತ್ತಾರೆ. ನೇಮಿಸುವಾಗ ಸಂಬಂಧಪಟ್ಟ ರಾಜ್ಯದ ರಾಜ್ಯಪಾಲರೊಂದಿಗೆ ಸಮಾಲೋಚಿಸುತ್ತಾರೆ.

**3) ಅವಧಿ:** ಉಚ್ಚ ನ್ಯಾಯಾಲಯದ ನ್ಯಾಯಾಧೀಶರು 62 ವರ್ಷ ವಯಸ್ಸಾಗುವವರೆಗೆ ತಮ್ಮ ಸ್ಥಾನದಲ್ಲಿರುತ್ತಾರೆ. 'ದುರ್ನಡತೆ' ಅಥವಾ 'ಅಸಮರ್ಥ'ತೆಯ ಕಾರಣದಿಂದ ಅಥವಾ ಸಂವಿಧಾನ ವಿರೋಧಿ ಕೃತ್ಯಗಳಲ್ಲಿ ತೊಡಗಿದ ಕಾರಣದಿಂದಾಗಿ ಅವರನ್ನು ಸಂಸತ್ 'ಮಹಾಭಿಯೋಗ'ದ ಮೂಲಕ ಪದಚ್ಯುತಗೊಳಿಸಬಹುದು.

**4) ಅರ್ಹತೆಗಳು:** ಸಂವಿಧಾನದ 217 ನೇ ವಿಧಿಯ ಪ್ರಕಾರ ಉಚ್ಚ ನ್ಯಾಯಾಲಯದ ನ್ಯಾಯಾಧೀಶರಾಗಲು ಈ ಅರ್ಹತೆಗಳನ್ನು ಹೊಂದಿರಬೇಕು.

1. ಭಾರತದ ಪೌರರಾಗಿರಬೇಕು.
2. ಒಂದು ಅಥವಾ ಹೆಚ್ಚು ಉಚ್ಚ ನ್ಯಾಯಾಲಯಗಳಲ್ಲಿ 10 ವರ್ಷಗಳ ಕಾಲ ನ್ಯಾಯಾಧೀಶರಾಗಿ ಸೇವೆ ಸಲ್ಲಿಸಿರಬೇಕು.
3. ರಾಷ್ಟ್ರಪತಿಗಳ ಅಭಿಪ್ರಾಯದಲ್ಲಿ ಉತ್ತಮ ನ್ಯಾಯಪಂಡಿತರಾಗಿರಬೇಕು.

**5) ವೇತನ ಮತ್ತು ಭತ್ಯೆಗಳು:** ಉಚ್ಚ ನ್ಯಾಯಲಯದ ನ್ಯಾಯಾಧೀಶರ ವೇತನವನ್ನು ಕಾಲ ಕಾಲಕ್ಕೆ ಸಂಸತ್ತು ನಿರ್ಧರಿಸುತ್ತದೆ. ಪ್ರಸ್ತುತ ಮುಖ್ಯನ್ಯಾಯಾಧೀಶರು 90,000 ರೂಗಳು ಮತ್ತು ಇತರ ನ್ಯಾಯಾಧೀಶರು 80,000 ರೂಗಳ ವೇತನವನ್ನು ಪಡೆಯುತ್ತಿದ್ದಾರೆ. ಅಲ್ಲದೆ ಉಚಿತ ನಿವಾಸ, ಸಾರಿಗೆ, ವಿದ್ಯುತ್, ನೀರು, ಟೆಲಿಫೋನ್ ಸವಲತ್ತುಗಳನು ನೀಡಲಾಗುತ್ತದೆ. ಇವರ ವೇತನ ಮತ್ತು ಭತ್ಯೆಗಳನ್ನು ರಾಜ್ಯದ ಸಂಚಿತ ನಿಧಿಯಿಂದ ಭರಿಸಲಾಗುತ್ತದೆ.

**6) ಪ್ರಮಾಣ ವಚನ:** ಪ್ರತಿಯೊಬ್ಬ ನ್ಯಾಯಾಧೀಶರು ತಮ್ಮ ಅಧಿಕಾರ ಸ್ವೀಕಾರಕ್ಕೆ ಮುನ್ನ ರಾಜ್ಯಪಾಲರ ಮುಂದೆ ಅಥವಾ ಅವರು ನೇಮಿಸಿದ ವ್ಯಕ್ತಿಯ ಮುಂದೆ ಭಾರತ ಸಂವಿಧಾನಕ್ಕೆ ನಿಷ್ಠೆಯಿಂದಿರುತ್ತೇವೆಂದು ಪ್ರಮಾಣ ವಚನ ಸ್ವೀಕರಿಸಬೇಕು.

**7) ವಿನಾಯಿತಿಗಳು:**

1. ನ್ಯಾಯಾಧೀಶರು ಅಧಿಕೃತವಾಗಿ ನೀಡುವ ಯಾವುದೇ ತೀರ್ಪುಗಳನ್ನು ಟೀಕಿಸುವಂತಿಲ್ಲ.
2. ಹಣಕಾಸಿನ ತುರ್ತು ಪರಿಸ್ಥಿಯನ್ನು ಹೊರತುಪಡಿಸಿ ಇನ್ನಾವುದೇ ಸಂದರ್ಭದಲ್ಲಿ ನ್ಯಾಯಾಧೀಶರ ವೇತನ ಮತ್ತು ಭತ್ಯೆಗಳನ್ನು ಕಡಿತಗೊಳಿಸುವಂತಿಲ್ಲ.

## ಉಚ್ಚನ್ಯಾಯಾಲಯದ ಅಧಿಕಾರ ಮತ್ತು ಕಾರ್ಯಗಳು:

ಉಚ್ಚನ್ಯಾಯಾಲಯದ ಅಧಿಕಾರ ವ್ಯಾಪ್ತಿಯು ರಾಜ್ಯದಾದ್ಯಂತ ವಿಸ್ತರಿಸಲ್ಪಟ್ಟಿರುತ್ತದೆ. ಇದರ ಪ್ರಮುಖ ಅಧಿಕಾರ ಮತ್ತು ಕಾರ್ಯಗಳು ಈ ಕೆಳಕಂಡಂತಿವೆ.

### *1) ಮೂಲ ಅಧಿಕಾರಗಳು (Original Jurisdiction) (225 ನೇ ವಿಧಿ):*

1. ಉಚ್ಚನ್ಯಾಯಾಲಯವು ಮೂಲಭೂತ ಹಕ್ಕುಗಳ ರಕ್ಷಕನಾಗಿರುವುದರಿಂದ ಅವುಗಳ ಜಾರಿಗೆ ಆದೇಶಗಳನ್ನು ನೀಡಬಹುದು. ಅಲ್ಲದೆ ಹಕ್ಕುಗಳ ಉಲ್ಲಂಘನೆಯಾದಾಗ ನೇರವಾಗಿ ನೊಂದವರ ನೆರವಿಗೆ ಬರಬಹುದು.
2. ಉಚ್ಚನ್ಯಾಯಾಲಯವು ಅಧೀನ ನ್ಯಾಯಾಲಯಗಳಲ್ಲಿರುವ ಮೊಕದ್ದಮೆಗಳನ್ನು ತನ್ನಲ್ಲಿಗೆ ವರ್ಗಾಯಿಸಿಕೊಳ್ಳಬಹುದು. ಕಾನೂನಿನ ಪ್ರಶ್ನೆಯನ್ನು ನಿರ್ಧರಿಸಿ ಅಧೀನ ನ್ಯಾಯಾಲಯಕ್ಕೆ ಮೊಕದ್ದಮೆಯನ್ನು ಅಂತ್ಯಗೊಳಿಸಲು ಸೂಚಿಸಬಹುದು.
3. ಸಿವಿಲ್ ಮೊಕದ್ದಮೆಗಳು ಬಹಳ ದೊಡ್ಡ ಮೊತ್ತದ ಮೌಲ್ಯಕ್ಕೆ ಸಂಬಂಧಿಸಿದ್ದರೆ ಅದನ್ನು ನೇರವಾಗಿ ಉಚ್ಚನ್ಯಾಯಾಲಯಕ್ಕೆ ತರಬಹುದು.
4. ವಿವಾದಗಳು, ಕಾಯಿದೆಗಳು, ಕಂಪನಿ ಕಾನೂನುಗಳು ಮತ್ತು ನ್ಯಾಯಾಂಗ ನಿಂದನೆಗೆ ಸಂಬಂಧಪಟ್ಟಂತೆ ಮೂಲಧಿಕಾರವನ್ನು ಹೊಂದಿದೆ.

*2) ಮನವಿಯ ಅಧಿಕಾರಗಳು (Appellate Jurisdiction):*

1. ದೊಡ್ಡ ಮೊತ್ತದ ಮೌಲ್ಯವುಳ್ಳ ಕೇಸುಗಳಲ್ಲಿ ಜಿಲ್ಲಾ ನ್ಯಾಯಾಧೀಶರು ಮತ್ತು ಅಧೀನ ನ್ಯಾಯಾಧೀಶರು ನೀಡಿದ ತೀರ್ಪಿನ ವಿರುದ್ಧ ಉಚ್ಚ ನ್ಯಾಯಾಲಯಕ್ಕೆ ನೇರವಾಗಿ ಮನವಿ ಸಲ್ಲಿಸಬಹುದು.
2. ಕೆಳಗಿನ ಹಂತದ ನ್ಯಾಯಾಲಯದ ತೀರ್ಪಿನ ಬಗ್ಗೆ ಜಿಲ್ಲಾ ನ್ಯಾಯಾಲಯ ತೀರ್ಪು ನೀಡಿದಾಗ ಉಚ್ಚ ನ್ಯಾಯಾಲಯಕ್ಕೆ ಮನವಿ ಸಲ್ಲಿಸಬಹುದು.
3. ಕ್ರಿಮಿನಲ್ ಮೊಕದ್ದಮೆಗಳಿಗೆ ಸಂಬಂಧಿಸಿದಂತೆ ಸೆಷನ್ಸ್‌ಯಾಧೀಶರು 7 ವರ್ಷಗಳಿಗೂ ಹೆಚ್ಚು ಕಾರಾಗೃಹ ಶಿಕ್ಷೆ ವಿಧಿಸಿದಾಗ ಅಥವಾ ಕೆಲವು ನಿರ್ಧಿಷ್ಟ ಮೊಕದ್ದಮೆಗಳಿಗೆ ತೀರ್ಪು ನೀಡಿದ ಸಂದರ್ಭದಲ್ಲಿ ಉಚ್ಚನ್ಯಾಯಾಲಯಕ್ಕೆ ಅಪೀಲು ಸಲ್ಲಿಸಬಹುದು.

*3) ಮೇಲ್ವಿಚಾರಣೆಯ ಅಧಿಕಾರಗಳು (Supervising Jurisdiction):*

1. ಉಚ್ಚ ನ್ಯಾಯಾಲಯವು ರಾಜ್ಯದಲ್ಲಿರುವ ಎಲ್ಲಾ ನ್ಯಾಯಾಲಯಗಳ ಮೇಲ್ವಿಚಾರಣೆ ಮಾಡಬಹುದು. ಸಾಮಾನ್ಯ ನಿಯಮಗಳನ್ನು ಪಾಲಿಸುವ ಹಾಗೂ ನಮೂನೆಗಳಲ್ಲಿ ನಿರ್ಧಿಷ್ಟ ನಮೂನೆಯಲ್ಲಿ ಲೆಕ್ಕಪತ್ರಗಳನ್ನು ನಿರ್ವಹಿಸುವ ಉಚ್ಚ ನ್ಯಾಯಲಯವು ಸೂಚಿಸಬಹುದು.
2. ಜಿಲ್ಲಾ ಮತ್ತು ಅಧೀನ ನ್ಯಾಯಾಲಯಗಳ ಮೇಲೆ ಉಚ್ಚ ನ್ಯಾಯಾಲಯವು ಸಂಪೂರ್ಣ ನಿಯಂತ್ರಣ ಹೊಂದಿದೆ. ರಾಜ್ಯ ನ್ಯಾಯಿಕ ಸೇವೆಯಲ್ಲಿರುವ ವ್ಯಕ್ತಿಗಳಿಗೆ ಸ್ಥಳ ನಿಯುಕ್ತಿ, ಬಡ್ತಿ ಇತ್ಯಾದಿ ವಿಷಯಗಳೆಲ್ಲವೂ ಉಚ್ಚ ನ್ಯಾಯಾಲಯದ ವ್ಯಾಪ್ತಿಗೆ ಒಳಪಡುತ್ತವೆ.

*4) ನ್ಯಾಯಿಕ ವಿಮರ್ಶೆ ಅಧಿಕಾರ (Judicial Review):*

ಉಚ್ಚ ನ್ಯಾಯಾಲಯವು ರಾಜ್ಯ ಶಾಸಕಾಂಗ ಮತ್ತು ಕಾರ್ಯಾಂಗಗಳಿಂದ ಅನುಮೋಧಿಸಲ್ಪಟ್ಟ ಶಾಸನಗಳು ಮತ್ತು ಕಾಯಿದೆಗಳು ಸಂವಿಧಾನ ಬದ್ಧತೆಯನ್ನು ವಿಮರ್ಶಿಸುವ ಅಧಿಕಾರವೇ 'ನ್ಯಾಯಿಕ ವಿಮರ್ಶೆ'.

1. ಉಚ್ಚ ನ್ಯಾಯಾಲಯವು ರಾಜ್ಯ ಶಾಸಕಾಂಗದಿಂದ ರೂಪಿಸಲ್ಪಟ್ಟ ಕಾನೂನುಗಳು ಸಂವಿಧಾನದ ನಿಯಮಗಳಿಗೆ ಅನುಗುಣವಾಗಿವೆಯೇ ಅಥವಾ ಇಲ್ಲವೆ ಎಂಬುದನ್ನು ವಿಮರ್ಶಿಸುತ್ತದೆ. ಒಂದು ವೇಳೆ ಈ ಕಾನೂನುಗಳು ಸಂವಿಧಾನದ ನಿಯಮಗಳನ್ನು ಉಲ್ಲಂಘಿಸುವಂತಿದ್ದರೆ ಅವುಗಳನ್ನು 'ಅಸಿಂಧು' ಅಥವಾ 'ಸಂವಿಧಾನ ಬಾಹಿರ' ಎಂದು ಘೋಷಿಸುತ್ತದೆ. ಈ ಅಧಿಕಾರವನ್ನೇ 'ನ್ಯಾಯಿಕ ವಿಮರ್ಶೆ' ಅಧಿಕಾರ ಎಂದು ಕರೆಯುತ್ತಾರೆ.

2. ಉಚ್ಚ ನ್ಯಾಯಲಯವು ರಾಜ್ಯ ಕಾರ್ಯಾಂಗದ ನಿರ್ಧಾರಗಳು, ಆದೇಶಗಳು ಮತ್ತು ಆಜ್ಞೆಗಳು ಸಂವಿಧಾನದ ನಿಯಮಗಳಿಗೆ ಅನುಗುಣವಾಗಿವೆಯೇ ಅಥವಾ ಇಲ್ಲವೇ ಎಂಬುದನ್ನು ವಿಮರ್ಶಿಸುತ್ತದೆ. ಅಥವಾ 'ಸಂವಿಧಾನ ಬಾಹಿರ' ಎಂದು ಘೋಷಿಸುತ್ತದೆ.

*5) ಅಧೀನ ನ್ಯಾಯಾಲಯಗಳ ಮೇಲೆ ನಿಯಂತ್ರಣ (Control over Subordinate Courts):*

1. ಉಚ್ಚ ನ್ಯಾಯಾಲಯದ ನ್ಯಾಯಧೀಶರು ಅಧೀನ ನ್ಯಾಯಾಲಯದ ಆಡಳಿತ ಸಿಬ್ಬಂದಿಯನ್ನು ನೇಮಕ ಮಾಡುವ ಅಧಿಕಾರ ಹೊಂದಿದ್ದಾರೆ.
2. ಉಚ್ಚ ನ್ಯಾಯಾಲಯದ ನ್ಯಾಯಾಧೀಶರು ತಮ್ಮ ಆಡಳಿತ ಸಿಬ್ಬಂದಿಯ ಸೇವಾ ನಿಯಮಗಳನ್ನು ರೂಪಿಸುವ ಅಧಿಕಾರವನ್ನು ಹೊಂದಿದ್ದಾರೆ.
3. ರಾಜ್ಯಪಾಲರ ಅನುಮೋದನೆಯನ್ನು ಪಡೆದು ಉಚ್ಚ ನ್ಯಾಯಾಲಯವು ತನ್ನ ಆಡಳಿತ ಸಿಬ್ಬಂದಿಯ ವೇತನ, ಭತ್ಯೆ, ರಜೆ, ನಿವೃತ್ತಿ ವೇತನ ಮುಂತಾದ ವಿಷಯಗಳಿಗೆ ಸಂಬಂಧಿಸಿದ ನಿಯಮಗಳನ್ನು ರೂಪಿಸುವ ಅಧಿಕಾರವನ್ನು ಹೊಂದಿದೆ.

*6) ದಾಖಲೆಗಳ ನ್ಯಾಯಾಲಯ (Court of Record):*

1. ಉಚ್ಚನ್ಯಾಯಾಲಯವು ತನ್ನ ಕಾರ್ಯ ಕಲಾಪಗಳು ಹಾಗೂ ತೀರ್ಪುಗಳನ್ನು ದಾಖಲೆಯ ರೂಪದಲ್ಲಿ ಸಂಗ್ರಹಿಸುತ್ತದೆ.
2. ಅಧೀನ ನ್ಯಾಯಾಲಯಗಳು ಅವಶ್ಯವೆನಿಸಿದಾಗ ಉಚ್ಚನ್ಯಾಯಾಲಯವು ನೀಡಿರುವ ತೀರ್ಪುಗಳ ದಾಖಲೆಗಳ ಆಧಾರದ ಮೇಲೆ ಮೊಕದ್ದಮೆಗಳನ್ನು ಇತ್ಯರ್ಥಪಡಿಸುತ್ತವೆ.
3. ಉಚ್ಚ ನ್ಯಾಯಾಲಯವು ನೀಡಿರುವ ತೀರ್ಪುಗಳ ದಾಖಲೆಗಳು ಸಾಕ್ಷ್ಯಮೌಲ್ಯವನ್ನು ಹೊಂದಿರುವುದಲ್ಲದೆ ಪೂರ್ವ ನಿದರ್ಶನಗಳಾಗಿಯೂ ಇರುತ್ತವೆ.

*7) ಮೂಲಭೂತ ಹಕ್ಕುಗಳ ರಕ್ಷಣೆ:*

ಉಚ್ಚ ನ್ಯಾಯಾಲಯವು ಸಹ ಸರ್ವೋಚ್ಚ ನ್ಯಾಯಲಯದಂತೆ ಸಂವಿಧಾನದ 226 ನೇ ವಿಧಿಯ ಪ್ರಕಾರ ರಿಟ್‌ಗಳನ್ನು ಅಥವಾ ವಿಶೇಷ ಆಜ್ಞೆಗಳನ್ನು ಹೊರಡಿಸುವ ಅಧಿಕಾರವನ್ನು ಹೊಂದಿದೆ. ಮೂಲಭೂತ ಹಕ್ಕುಗಳ ಉಲ್ಲಂಘನೆಯಾದಾಗ ಪ್ರಜೆಗಳು ಅವುಗಳನ್ನು ರಕ್ಷಿಸುವಂತೆ ಉಚ್ಚ ನ್ಯಾಯಾಲಯದಲ್ಲಿ ಅರ್ಜಿ ಸಲ್ಲಿಸಬಹುದು. ಆಗ ಉಚ್ಚ

ನ್ಯಾಯಾಲಯವು 226 ನೇ ವಿಧಿಯನ್ವಯ ಮೂಲಭೂತ ಹಕ್ಕುಗಳೊಂದಿಗೆ ಇತರೆ ಕಾನೂನು ಬದ್ಧ ಹಕ್ಕುಗಳನ್ನು ರಕ್ಷಿಸಲು ಕೂಡ ವಿಶೇಷ ಆಜ್ಞೆ ನೀಡಬಹುದು, ಅಂತಹ ವಿಶೇಷ ಆಜ್ಞೆಗಳೆಂದರೆ:

1. ಬಂಧಿ ಪ್ರತ್ಯಕ್ಷೀಕರಣ. (ಹೇಬಿಯಸ್ ಕಾರ್ಪಸ್)
2. ಪರಮಾದೇಶ. (ಮ್ಯಾಂಡಮಸ್)
3. ಪ್ರತಿಬಂಧಕಾಜ್ಞೆ. (ಪ್ರೊಹಿಬಿಷನ್)
4. ಉತ್ಪ್ರೇಕ್ಷಣಾ ಲೇಖ. (ಸರ್ಷಿಯೋರರಿ)
5. ಕೋವಾರಂಟೋ.

ಭಾರತದ ನ್ಯಾಯಾಲಯಗಳು ದಕ್ಷತೆಯಿಂದ ಕೆಲಸ ಮಾಡಿ ಜನ ಮೆಚ್ಚುಗೆಗೆ ಪಾತ್ರವಾಗುತ್ತಿವೆ. ಸಮಾಜದ ಸುಧಾರಣೆಗೆ ಮತ್ತು ಬದಲಾವಣೆಗೆ ಸಹಕಾರ ನೀಡುತ್ತಿವೆ. ಇತ್ತೀಚಿನ ದಿನಗಳಲ್ಲಿ ಸಾರ್ವಜನಿಕ ಹಿತಾಸಕ್ತಿ ದಾವೆ (ಪಬ್ಲಿಕ್ ಇಂಟರೇಸ್ಟ್ ಲಿಟಿಗೇಷನ್)ಗಳ ಮೂಲಕ ಮಹತ್ತರ ತೀರ್ಪುಗಳನ್ನು ನೀಡುತ್ತಿರುವುದು ಇವುಗಳ ದಕ್ಷತೆ ಮತ್ತು ಕ್ರೀಯಾಶೀಲತೆಗೆ ಸಾಕ್ಷಿಯಾಗಿದೆ. ಜನತಾ ಸ್ವಾತಂತ್ರ್ಯದ ಸಂರಕ್ಷಣೆ, ಪ್ರಜಾಪ್ರಭುತ್ವದ ಶುದ್ಧೀಕರಣ ಮತ್ತು ಸಬಲೀಕರಣದಲ್ಲಿ ನೆರವಾಗುತ್ತಿರುವುದು ಪ್ರೇರಣೀಯ.

### ಅಧೀನ ನ್ಯಾಯಾಲಯಗಳು

**1. ಜಿಲ್ಲಾ ನ್ಯಾಯಾಲಯಗಳು:** ಶೀಘ್ರವಾಗಿ ನ್ಯಾಯ ನಿರ್ಣಯವನ್ನು ನೀಡುವ ಉದ್ದೇಶದಿಂದ ಮತ್ತು ಉಚ್ಚ ನ್ಯಾಯಾಲಯದ ಕಾರ್ಯಭಾರದ ಒತ್ತಡ ಕಡಿಮೆ ಮಾಡುವ ಉದ್ದೇಶದಿಂದ ಜಿಲ್ಲಾ ಮಟ್ಟದಲ್ಲಿ ಜಿಲ್ಲಾ ನ್ಯಾಯಾಲಯಗಳನ್ನು ಸ್ಥಾಪಿಸಲಾಗಿದೆ. ಜಿಲ್ಲಾ ಸಿವಿಲ್ ನ್ಯಾಯಾಲಯ ಮತ್ತು ಜಿಲ್ಲಾ ಕ್ರಿಮಿನಲ್ (ಸತ್ರ) ನ್ಯಾಯಾಲಯಗಳನ್ನು ಕಾಣಬಹುದು.

**2. ಕಂದಾಯ ನ್ಯಾಯಾಲಯ:** ಭೂ ಕಂದಾಯ ದಾಖಲೆಗಳ ಸಂರಕ್ಷಣೆ, ತೆರಿಗೆ ವಸೂಲಾತಿ ಮತ್ತು ಜಮಾ ಬಂಧಿಗೆ ಸಂಬಂಧಿಸಿದ ಪ್ರಕರಣಗಳನ್ನು ಇತ್ಯರ್ಥಗೊಳಿಸುತ್ತದೆ. ಕಂದಾಯ ನ್ಯಾಯಾಲಯಗಳು ಈ ಕೆಳಕಂಡ ಶ್ರೇಣಿಯನ್ನು ಹೊಂದಿರುತ್ತವೆ.

ಎ) ತಹಶೀಲ್ದಾರ್ ನ್ಯಾಯಾಲಯ
ಬಿ) ಉಪವಿಭಾಗಾಧಿಕಾರಿಗಳ ನ್ಯಾಯಾಲಯ
ಸಿ) ಜಿಲ್ಲಾ ಮ್ಯಾಜಿಸ್ಟ್ರೇಟ್ ನ್ಯಾಯಾಲಯ (ಜಿಲ್ಲಾ ದಂಡಾಧಿಕಾರಿ)
ಡಿ) ಆಯುಕ್ತರ ನ್ಯಾಯಾಲಯ
ಇ) ಕಂದಾಯ ಮಂಡಳಿ

**3. ಗ್ರಾಹಕ ನ್ಯಾಯಾಲಯಗಳು:** 1986 ರ ಗ್ರಾಹಕ ರಕ್ಷಣಾ ಕಾಯ್ದೆಯು ಗ್ರಾಹಕರಿಗೆ ಸೂಕ್ತ ಪರಿಹಾರವನ್ನು ಒದಗಿಸುವುದಲ್ಲದೆ ಗ್ರಾಹಕ ಶಿಕ್ಷಣ, ಗ್ರಾಹಕರ ಹಕ್ಕುಗಳ ರಕ್ಷಣೆ ಮತ್ತು ಗ್ರಾಹಕರಿಗೆ ಸಂಬಂಧಿಸಿದ ಪ್ರಮುಖ ವಿಷಯಗಳ ಬಗ್ಗೆ ಸರ್ಕಾರಕ್ಕೆ ಸಲಹೆ ನೀಡುವ

ಉದ್ದೇಶವನ್ನು ಹೊಂದಿದೆ. ಈ ಕಾಯ್ದೆಯು ತಾಲ್ಲೂಕು, ಜಿಲ್ಲಾ, ರಾಜ್ಯ, ರಾಷ್ಟ್ರ ಮಟ್ಟದಲ್ಲಿ ನ್ಯಾಯಾಲಯಗಳನ್ನು ಸ್ಥಾಪಿಸಿ ಗ್ರಾಹಕರ ಸಮಸ್ಯೆಗಳನ್ನು ಇತ್ಯರ್ಥಪಡಿಸುವ ಮೂಲಕ ಅವರಿಗೆ ಪರಿಹಾರವನ್ನು ದೊರಕಿಸಲು ಅವಕಾಶ ಮಾಡಿಕೊಡುತ್ತದೆ. ಈ ನ್ಯಾಯಾಲಯಗಳನ್ನು 'ಗ್ರಾಹಕ ವ್ಯಾಜ್ಯ ತೀರ್ಮಾನ ವೇದಿಕೆ' (Consumer dispute redressal forum) ಎಂದು ಕರೆಯಲಾಗಿದೆ.

**4. ಲೋಕ ಅದಾಲತ್ (ಜನತಾ ನ್ಯಾಯಾಲಯಗಳು):** ನ್ಯಾಯ ವಿತರಣೆಯಲ್ಲಿ ಆಗುತ್ತಿರುವ ವಿಳಂಬವನ್ನು ತಪ್ಪಿಸಲು, ಪ್ರಕರಣವೊಂದರ ವಾದಿ ಮತ್ತು ಪ್ರತಿವಾದಿಗಳಿಬ್ಬರ ರಾಜೀ ಸಂಧಾನ ಏರ್ಪಡಿಸುವ ಮೂಲಕ ಪ್ರಕರಣಗಳನ್ನು ಇತ್ಯರ್ಥಗೊಳಿಸುವುದು.

### *8) ವಿಚಾರಣಾ ಅಧಿಕಾರಗಳು (Enquiry Jurisdiction):*

ರಾಜ್ಯ ಸರ್ಕಾರವು ಪ್ರಮುಖ ಪ್ರಕರಣಗಳಿಗೆ ಸಂಬಂಧಿಸಿದಂತೆ ವಿಚಾರಣೆ ನಡೆಸಲು ವಿಚಾರಣಾ ಆಯೋಗಗಳನ್ನು ನೇಮಿಸುತ್ತದೆ. ಉಚ್ಚ ನ್ಯಾಯಾಲಯದ ಹಾಲಿ ಅಥವಾ ಮಾಜಿ ನ್ಯಾಯಾಧೀಶರುಗಳು ಇದರ ಅಧ್ಯಕ್ಷರಾಗಿ ಕಾರ್ಯನಿರ್ವಹಿಸುತ್ತಾರೆ. ಉದಾಹರಣೆಗೆ ಕರ್ನಾಟಕದಲ್ಲಿ ಎ. ಜೆ. ಸದಾಶಿವ ಆಯೋಗ, ವೈದ್ಯನಾಥನ್ ಆಯೋಗ, ಯು. ಬಿ. ಭಟ್ ಆಯೋಗ ಮುಂತಾದವುಗಳು.

ಒಟ್ಟಿನಲ್ಲಿ ಇಡೀ ರಾಷ್ಟ್ರದ ದೃಷ್ಟಿಯಿಂದ ಸರ್ವೋಚ್ಚ ನ್ಯಾಯಾಲಯದ ಸೇವೆ ಎಷ್ಟು ಮುಖ್ಯವೋ ಇಡೀ ರಾಜ್ಯದ ದೃಷ್ಟಿಯಿಂದ ಉಚ್ಚ ನ್ಯಾಯಾಲಯದ ಸೇವೆಯೂ ಕೂಡ ಅಷ್ಟೇ ಮುಖ್ಯವಾದುದಾಗಿದೆ.

## ಅಭ್ಯಾಸ

I. **ಒಂದು ವಾಕ್ಯದಲ್ಲಿ ಉತ್ತರಿಸಿ.**

1. ಉಚ್ಚ ನ್ಯಾಯಾಲಯದ ಮುಖ್ಯ ನ್ಯಾಯಾಧೀಶರನ್ನು ಯಾರು ನೇಮಕ ಮಾಡುತ್ತಾರೆ?
2. ಲೋಕ ಅದಾಲತ್ ಎಂದರೇನು?

II. **ಸರಿಯಾದ ಉತ್ತರವನ್ನು ಆರಿಸಿ ಉತ್ತರ ಸೂಚಿಯಲ್ಲಿ ಗುರುತಿಸಿ.**

1. ರಾಜ್ಯದೊಳಗಿನ ಅತ್ಯುನ್ನತ ನ್ಯಾಯಾಲಯ.

   ಎ) ಲೋಕ ಅದಾಲತ್

   ಬಿ) ಸೆಷನ್ಸ್ ನ್ಯಾಯಾಲಯ

   ಸಿ) ಸಿವಿಲ್ ನ್ಯಾಯಾಲಯ

   ಡಿ) ಉಚ್ಚ ನ್ಯಾಯಾಲಯ

2. ಉಚ್ಚ ನ್ಯಾಯಾಲಯದ ನ್ಯಾಯಾಧೀಶರ ನಿವೃತ್ತಿ ವಯಸ್ಸು.

ಎ) 62 ವರ್ಷ

ಬಿ) 63 ವರ್ಷ

ಸಿ) 64 ವರ್ಷ

ಡಿ) 65 ವರ್ಷ

3. ಜಿಲ್ಲಾ ಸೆಷನ್ಸ್ ನ್ಯಾಯಾಲಯಗಳಲ್ಲಿ ತೀರ್ಮಾನಿಸುವ ಮೊಕದ್ದಮೆಗಳು.

ಎ) ಕ್ರಿಮಿನಲ್ ಮೊಕದ್ದಮೆಗಳು

ಬಿ) ಸಿವಿಲ್ ಮೊಕದ್ದಮೆಗಳು

ಸಿ) ರಾಜ್ಯಗಳ ನಡುವಿನ ಮೊಕದ್ದಮೆಗಳು

ಡಿ) ನೀರಿನ ವಿವಾದಗಳು

III. **ಎರಡು ಅಥವಾ ಮೂರು ವಾಕ್ಯಗಳಲ್ಲಿ ಉತ್ತರಿಸಿ.**

1. ನ್ಯಾಯಿಕ ವಿಮರ್ಶೆ ಎಂದರೇನು?
2. ಕಂದಾಯ ನ್ಯಾಯಾಲಯಗಳ ಶ್ರೇಣಿಯನ್ನು ಬರೆಯಿರಿ?

IV. **ನಾಲ್ಕು ಅಥವಾ ಐದು ವಾಕ್ಯಗಳಲ್ಲಿ ಉತ್ತರಿಸಿ.**

1. ಉಚ್ಚ ನ್ಯಾಯಾಲಯದ ಮೂಲ ಅಧಿಕಾರಗಳನ್ನು ತಿಳಿಸಿ.
2. ಉಚ್ಚ ನ್ಯಾಯಾಲಯವು ಅಧೀನ ನ್ಯಾಯಾಲಯಗಳ ಮೇಲೆ ಹೇಗೆ ನಿಯಂತ್ರಣ ಹೊಂದಿರುತ್ತದೆ?
3. ನ್ಯಾಯಿಕ ವಿಮರ್ಶೆ ಅಧಿಕಾರವನ್ನು ವಿವರಿಸಿ.

V. **ಎಂಟು ಅಥವಾ ಹತ್ತು ವಾಕ್ಯಗಳಲ್ಲಿ ಉತ್ತರಿಸಿ.**

1. ಉಚ್ಚ ನ್ಯಾಯಾಲಯದ ರಚನೆಯನ್ನು ಬರೆಯಿರಿ.
2. ಉಚ್ಚ ನ್ಯಾಯಾಲಯದ ಅಧಿಕಾರ ಮತ್ತು ಕಾರ್ಯಗಳನ್ನು ವಿವರಿಸಿ.

**ಸಲಹಾತ್ಮಕ ಚಟುವಟಿಕೆ:**

1. ಯಾವುದಾದರೊಂದು ಪ್ರಕರಣವನ್ನು ಕೈಗೆತ್ತಿಕೊಂಡು ನಿಮ್ಮಲ್ಲಿಯೇ ಒಂದು ಅಣಕು ನ್ಯಾಯಾಲಯವನ್ನು ರಚಿಸಿ, ಅಭಿನಯಿಸಿ.

## ಅಧ್ಯಾಯ- 11 ಸ್ಥಳೀಯ ಸರ್ಕಾರಗಳು (Local Self Governments)

### ಕಲಿಕಾ ಉದ್ದೇಶಗಳು:

1. ಪ್ರಜಾಸತ್ತಾತ್ಮಕ ವಿಕೇಂದ್ರೀಕರಣದ ಬಗ್ಗೆ ಅರಿವು ಮೂಡಿಸುವುದು.
2. ಸ್ಥಳೀಯ ಸಂಸ್ಥೆಗಳು ಆಡಳಿತದ ಘಟಕಗಳಾಗಿ ಸ್ಥಳೀಯ ಮಟ್ಟದಲ್ಲಿ ಹೇಗೆ ಕಾರ್ಯನಿರ್ವಹಿಸುತ್ತವೆ ಎಂಬುದರ ಬಗ್ಗೆ ತಿಳುವಳಿಕೆ ಹೊಂದುವುದು.
3. ಸ್ಥಳೀಯ ಮಟ್ಟದಲ್ಲಿ ನಾಯಕತ್ವದ ಗುಣಗಳನ್ನು ಬೆಳೆಸಿಕೊಳ್ಳಲು ಪ್ರೇರೆಪಿಸುವುದು
4. ಸ್ಥಳೀಯ ಸಮಸ್ಯೆಗಳಿಗೆ ಪರಿಹಾರವನ್ನು ಒದಗಿಸುವ ನಿಟ್ಟಿನಲ್ಲಿ ಜನಪ್ರತಿನಿಧಿಗಳ ಸ್ಪಂದನೆಯ ಬಗ್ಗೆ ಅರಿವನ್ನು ಹೊಂದುವುದು.

"ಉತ್ತಮ ಪ್ರಜಾಸತ್ತಾತ್ಮಕ ಸಂಸ್ಥೆಗಳ ಖಚಿತತೆ ಮತ್ತು ಯಶಸ್ಸು ಸ್ಥಳೀಯ ಸಂಸ್ಥೆಗಳ ದಕ್ಷತೆ ಮತ್ತು ಕಾರ್ಯನಿರ್ವಹಣೆಯಲ್ಲಿ ಅಡಗಿದೆ" **ಲಾರ್ಡ್ ಬ್ರೈಸ್.**

ಸ್ಥಳೀಯ ಸಮಸ್ಯೆಗಳನ್ನು ಸ್ಥಳೀಯ ಮಟ್ಟದಲ್ಲಿ, ಸ್ಥಳೀಯ ಪ್ರಜೆಗಳಿಂದಲೇ ಶೀಘ್ರವಾಗಿ ಪರಿಹರಿಸಿಕೊಳ್ಳಲು ಶಾಸನಾತ್ಮಕವಾಗಿ ರಚಿಸಲ್ಪಟ್ಟಿರುವ ಆಡಳಿತಾತ್ಮಕ ಸಂಸ್ಥೆಗಳೇ ಸ್ಥಳೀಯ ಸರ್ಕಾರಗಳು. ಇವು ಸ್ಥಳೀಯ ಜನರು ಸಕ್ರಿಯವಾಗಿ ಪಾಲ್ಗೊಂಡು, ತಮ್ಮ ಸಮಸ್ಯೆಗಳಿಗೆ ಪರಿಣಾಮಕಾರಿ ಪರಿಹಾರೋಪಾಯಗಳನ್ನು ಕಂಡುಕೊಳ್ಳಲು ಅವಕಾಶ ನೀಡುತ್ತವೆ. ಹಾಗೆಯೇ ತಮ್ಮ ಸ್ಥಳೀಯ ಹಿತಾಸಕ್ತಿ ರಕ್ಷಣೆ ಮತ್ತು ಅಭಿವೃದ್ಧಿಗೆ ಪೂರಕವಾದ ಯೋಜನೆಗಳನ್ನು ರೂಪಿಸುವ ಜವಾಬ್ದಾರಿಯನ್ನು ಸ್ಥಳೀಯ ಜನರಿಗೆ ಈ ವ್ಯವಸ್ಥೆ ನೀಡುತ್ತದೆ.

ಸ್ಥಳೀಯ ಸರ್ಕಾರ ವ್ಯವಸ್ಥೆಯು ಪ್ರಜಾಸತ್ತಾತ್ಮಕ ವಿಕೇಂದ್ರೀಕರಣದಡಿಯಲ್ಲಿ ಕೇಂದ್ರ ಮತ್ತು ರಾಜ್ಯಗಳಂತೆಯೇ ಗ್ರಾಮೀಣ ಸ್ಥಳೀಯ ಜನರು ಸಂಸ್ಥೆಗಳಾದ ಮಹಾನಗರ ಪಾಲಿಕೆ, ನಗರಸಭೆ, ಪುರಸಭೆಗಳಿಗೆ ಸಂವಿಧಾನಬದ್ಧ ಅಧಿಕಾರವನ್ನು ನೀಡಲಾಗಿದೆ.

ಇದು ಪ್ರಜಾಪ್ರಭುತ್ವದ ತಳಹದಿಯಾಗಿದ್ದು ಕೆಳಹಂತದ ಆಡಳಿತ ವ್ಯವಸ್ಥೆಯಲ್ಲಿ ದಕ್ಷತೆಯನ್ನು ಹೆಚ್ಚಿಸುವಲ್ಲಿ ನೆರವಾಗಿದೆ. ಅಲ್ಲದೆ ಜನರಿಗೆ ರಾಜಕೀಯ ಶಿಕ್ಷಣ ಮತ್ತು ತರಬೇತಿ ನೀಡುವ ಜೊತೆಗೆ ಭವಿಷ್ಯದ ನಾಯಕರ ಸೃಷ್ಟಿಗೆ ಕಾರಣವಾಗಿದೆ. ರಾಜಕೀಯ ಚಿಂತಕ ಎಚ್. ಜೆ. ಲಾಸ್ಕಿಯವರು. "ಸ್ಥಳೀಯ ಸರ್ಕಾರ ಸಂಸ್ಥೆಗಳು ಬೌದ್ಧಿಕ ಸಂಸ್ಥೆಯಾಗಿ ಕಾರ್ಯನಿರ್ವಹಿಸುತ್ತವೆ." ಎಂದು ಅಭಿಪ್ರಾಯ ಪಟ್ಟಿದ್ದಾರೆ.

ಸಂವಿಧಾನದನ್ವಯವೇ ಸ್ಥಳೀಯ ಸರ್ಕಾರಿ ಸಂಸ್ಥೆಗಳಿಗೆ ಅಧಿಕಾರ ನೀಡಿ ಕೇಂದ್ರ ಸರ್ಕಾರ ಮತ್ತು ರಾಜ್ಯ ಸರ್ಕಾರಗಳ ಮೇಲಿನ ಆಡಳಿತಾತ್ಮಕ ಹೊರೆಯನ್ನು ತಗ್ಗಿಸಲು ನೆರವಾಗುವ ಪ್ರಕ್ರಿಯೆಯೇ ವಿಕೇಂದ್ರಿಕರಣ. ಪ್ರಜಾಪ್ರಭುತ್ವವೆಂಬುದು ಕೇವಲ ಉನ್ನತ ಮಟ್ಟದಲ್ಲಿ ಕಾರ್ಯ ನಿರ್ವಹಿಸಿದರಷ್ಟೇ ಸಾಲದು ಕೆಳಹಂತದಲ್ಲಿ ತನ್ನ ತಳಹದಿಯನ್ನು ಭದ್ರಪಡಿಸಿಕೊಂಡರೆ ಮಾತ್ರ ಅದೊಂದು ಯಶಸ್ವಿ ವ್ಯವಸ್ಥೆಯಾಗುತ್ತದೆ.

ಸರ್ಕಾರದ ಯಾವುದೇ ಯೋಜನೆಗಳು ಉದ್ದೇಶ ಮತ್ತು ಗುರಿ ಈಡೇರಬೇಕಾದರೆ ಅವುಗಳ ಫಲ ಜನರನ್ನು ತಲುಪಬೇಕು.

## ಭಾರತದಲ್ಲಿ ಸ್ಥಳೀಯ ಸರ್ಕಾರಗಳ ಹಿನ್ನೆಲೆ

ಭಾರತದಲ್ಲಿ ಸ್ಥಳೀಯ ಸರ್ಕಾರ ವ್ಯವಸ್ಥೆ ಪುರಾತನ ಕಾಲದಿಂದಲೂ ಅಸ್ತಿತ್ವದಲ್ಲಿದ್ದವು. ಋಗ್ವೇದ ಕಾಲದಲ್ಲಿ (ಕಿ. ಪೂ. 1700) ಹಳ್ಳಿಗಳ ಸ್ವಯಂ ಆಡಳಿತ ನಡೆಸುತ್ತಿದ್ದ 'ಸಭೆಗಳು ಅಸ್ತಿತ್ವದಲ್ಲಿದ್ದವು ಅರ್ಥಶಾಸ್ತ್ರ' ವೆಂಬ ಕೌಟಿಲ್ಯನ ಮೇರುಕೃತಿಯಲ್ಲಿ 'ಸಮಿತಿಗಳು' ಎಂಬ ಸ್ಥಳೀಯ ಸಂಸ್ಥೆಗಳು ಅಸ್ತಿತ್ವದಲ್ಲಿದ್ದವು ಎಂದು ಉಲ್ಲೇಖಿಸಲಾಗಿದೆ.

ಬ್ರಿಟಿಷರ ಆಡಳಿತ ಕಾಲದಲ್ಲಿ ಸ್ಥಳೀಯ ಸರ್ಕಾರಕ್ಕೆ ಸಂಬಂಧಿಸಿದಂತೆ 1870 ರಲ್ಲಿ ವೈಸರಾಯ್ ಲಾರ್ಡ ಮೇಯೋರವರು ಒಂದು ನಿರ್ಣಯವನ್ನು ಜಾರಿ ಮಾಡಿದ್ದರು. ನಂತರ ಭಾರತದ ಸ್ಥಳೀಯ ಸರ್ಕಾರ ವ್ಯವಸ್ಥೆಗೆ ಪಿತಾಮಹನಾದ ಲಾರ್ಡ ರಿಪ್ಪನ್ 18 ಮೇ 1882 ರಲ್ಲಿ ಸ್ಥಳೀಯ ಸರ್ಕಾರ ವ್ಯವಸ್ಥೆಗೆ ಸಂಬಂಧಿಸಿದ ಎರಡು ಅಂಶಗಳನ್ನೊಳಗೊಂಡ ಸನ್ನದ(ಚಾರ್ಟರ್)ನ್ನು ಜಾರಿಗೆ ತಂದನು. ಅವುಗಳೆಂದರೆ;

1. ಆಡಳಿತಾತ್ಮಕ ದಕ್ಷತೆ
2. ರಾಜಕೀಯ ಶಿಕ್ಷಣ

1907 ರ ಲ್ಲಿ ರಾಯಲ್ ಕಮಿಷನ್, 1919 ರ ಮಾಂಟೆಗೊ ಚೆಮ್ಸ್ ಫೋರ್ಡ್ ಸುಧಾರಣೆ, 1935 ರ ಭಾರತ ಸರ್ಕಾರ ಕಾಯಿದೆಗಳಲ್ಲಿ ಗ್ರಾಮ ಪಂಚಾಯಿತಿಯ ಮಹತ್ವವನ್ನು ಪ್ರಸ್ತಾಪಿಸಲಾಗಿದೆ.

ಗಾಂಧೀಜಿಯವರು "ಗ್ರಾಮ ಪಂಚಾಯಿತಿಗಳು ಭಾರತ ಸ್ವಾಯತ್ತ ಸರ್ಕಾರದ ತಳಹದಿಯಾಗಿವೆ" ಎಂದು ಅಭಿಪ್ರಾಯಪಟ್ಟಿದ್ದರು. ಇದರ ಆಧಾರದ ಮೇಲೆ ಸಂವಿಧಾನ ರಚನಾ ಸಭೆಯು ರಾಜ್ಯನೀತಿ ನಿರ್ದೇಶಕ ತತ್ವಗಳ ಪಟ್ಟಿಯ 40 ನೇ ವಿಧಿಯಲ್ಲಿ ಪಂಚಾಯಿತಿ ರಾಜ್ ವ್ಯವಸ್ಥೆಯ ಸ್ಥಾಪನೆಗೆ ಅವಕಾಶ ಕಲ್ಪಿಸಿದೆ.

ಸ್ವಾತಂತ್ರ್ಯನಂತರ ಭಾರತದ ಪ್ರಥಮ ಪ್ರಧಾನಿ ಪಂಡಿತ್ ಜವಾಹರಲಾಲ್ ನೆಹರೂರವರು ಸಮುದಾಯ ಅಭಿವೃದ್ಧಿ ಯೋಜನೆ (Community Development Programme)ಯನ್ನು 1952 ರಲ್ಲಿ ಜಾರಿಗೊಳಿಸಿ ಗ್ರಾಮೀಣ ಅಭಿವೃದ್ಧಿಯಲ್ಲಿ ಹೆಚ್ಚು ಜನರು ಪಾಲ್ಗೊಳ್ಳುವಂತೆ ಮಾಡಿದರು. ಅಕ್ಟೋಬರ್, 2, 1959 ರಂದು ಪ್ರಥಮ ಬಾರಿಗೆ ರಾಜಸ್ಥಾನ ರಾಜ್ಯದ "ನಾಗೋರ್" ಎಂಬಲ್ಲಿ ಪಂಚಾಯಿತಿ ರಾಜ್ ವ್ಯವಸ್ಥೆಯನ್ನು ನೆಹರು ಉದ್ಘಾಟಿಸಿದರು. ಕೇಂದ್ರ ಸರ್ಕಾರವು ರಚಿಸಿದ.

1957 ರಲ್ಲಿ ಬಲವಂತರಾಯ ಮೆಹತಾ ಸಮಿತಿ.

1963 ರಲ್ಲಿ ಕೆ. ಸಂತಾನಂ ಆಯೋಗ.

1978 ರಲ್ಲಿ ಅಶೋಕ ಮೆಹ್ತಾ ಸಮಿತಿ.

1985 ರಲ್ಲಿ ಜೆ. ವಿ. ಕೆ. ರಾವ್ ಸಮಿತಿ.

1986 ರಲ್ಲಿ ಎಂ. ಎಲ್. ಸಿಂಗ್ವಿ ಸಮಿತಿಗಳು.

ತಮ್ಮ ವರದಿಗಳಲ್ಲಿ ಪಂಚಾಯಿತ್ ರಾಜ್ ಸಂಸ್ಥೆಗಳು ಜನರ ಸಮಸ್ಯೆಗಳನ್ನು ನಿವಾರಿಸುವಲ್ಲಿ ಪ್ರಮುಖ ಪಾತ್ರ ವಹಿಸುತ್ತವೆ ಎಂದು ಅಭಿಪ್ರಾಯಪಟ್ಟವು. 1972 ರಲ್ಲಿ ಸಂವಿಧಾನದ 243 ನೇ ವಿಧಿಗೆ 73 ಮತ್ತು 74 ನೇ ತಿದ್ದುಪಡಿ ಕಾಯ್ದೆಗಳನ್ನು ಮಾಡಲಾಯಿತು. ಇವು 1993 ರ ಏಪ್ರಿಲ್ 24 ರಂದು ಜಾರಿಗೆ ಬಂದವು. ಪರಿಣಾಮವಾಗಿ ಗ್ರಾಮೀಣ ಮತ್ತು ನಗರ ಸ್ಥಳೀಯ ಸಂಸ್ಥೆಗಳಲ್ಲಿ ಪ್ರಜೆಗಳು ನೇರವಾಗಿ ಸ್ಥಳೀಯ ಸಂಸ್ಥೆಗಳ ಆಡಳಿತದಲ್ಲಿ ಭಾಗವಹಿಸಲು ನೆರವಾಯಿತು.

ಈ ಮೇಲಿನ ತಿದ್ದುಪಡಿಗಳಿಂದಾಗಿಯೇ ಗ್ರಾಮೀಣ ಮತ್ತು ನಗರ ಸ್ಥಳೀಯ ಸಂಸ್ಥೆಗಳು ಸಂವಿಧಾನಾತ್ಮಕ ಸ್ಥಾನಮಾನ ಪಡೆದವು. ಈ ಸಂಸ್ಥೆಗಳಿಗೂ ಐದು ವರ್ಷಕ್ಕೊಮ್ಮೆ ಚುನಾವಣೆಗಳು ನಡೆಯುತ್ತವೆ. ಇದೆಲ್ಲವೂ ವಿಕೇಂದ್ರಿಕೃತ ಪ್ರಜಾಪ್ರಭುತ್ವದ ವಿಸ್ತರಣೆಗೆ ಬುನಾದಿಯಾಯಿತು.

### ಕರ್ನಾಟಕ ಜಿಲ್ಲಾ ಪಂಚಾಯಿತಿ ತಾಲ್ಲೂಕು ಪಂಚಾಯಿತಿ ಸಮಿತಿಗಳು, ಮಂಡಲ ಪಂಚಾಯ್ತಿ ಮತ್ತು ನ್ಯಾಯ ಪಂಚಾಯ್ತಿಗಳ ಕಾಯ್ದೆ- 1983

1983 ರಲ್ಲಿ ರಾಮಕೃಷ್ಣ ಹೆಗಡೆ ನೇತೃತ್ವದ ಜನತಾ ಪಕ್ಷದ ಸರ್ಕಾರವು ಕರ್ನಾಟಕ ರಾಜ್ಯ ಜಿಲ್ಲಾ ಪಂಚಾಯ್ತಿಗಳು ಮತ್ತು ನ್ಯಾಯ ಪಂಚಾಯ್ತಿಗಳ ಕಾಯ್ದೆ ಕರ್ನಾಟದಲ್ಲಿ ಕಾಯ್ದೆಯನ್ನು 1983 ನ್ನು ರೂಪಿಸಿತು. ಈ ಕಾಯ್ದೆಯು 1985 ರಲ್ಲಿ ಜಾರಿಗೆ ಬಂದಿತು ಈ ಕಾಯ್ದೆ ಕರ್ನಾಟಕದಲ್ಲಿ ಅಧಿಕಾರ ವಿಕೇಂದ್ರೀಕರಣದತ್ತ ಇಟ್ಟ ದಿಟ್ಟ ಹೆಜ್ಜೆಯಾಗಿದೆ. ಈ ಕೀರ್ತಿ ರಾಮಕೃಷ್ಣ ಹೆಗಡೆಯವರೊಬ್ಬರಿಗಲ್ಲದೆ ಅಂದಿನ ಪಂಚಾಯತ್ ರಾಜ್ ಸಚಿವರಾಗಿದ್ದ, ನೀರ್ ಸಾಬ್ ಎಂದೇ ಖ್ಯಾತರಾದ ಅಬ್ದುಲ್ ನಜೀರ್ ಸಾಬ್‌ರವರಿಗೆ ಸಲ್ಲುತ್ತದೆ. ಈ ಕಾಯ್ದೆ ಮೊಟ್ಟ ಮೊದಲ ಬಾರಿಗೆ ವ್ಯವಸ್ಥಿತ ರೀತಿಯಲ್ಲಿ ಕರ್ನಾಟಕದಲ್ಲಿ ಪಂಚಾಯತ್ ರಾಜ್ ವ್ಯವಸ್ಥೆಯನ್ನು ಜಾರಿಗೊಳಿಸಿತು. ಅಲ್ಲದೆ ಪಂಚಾಯತ್ ರಾಜ್ ಸಂಸ್ಥೆಗಳಿಗೆ ಹೆಚ್ಚಿನ ಅಧಿಕಾರಗಳನ್ನು ನೀಡುವ ಇಚ್ಛೆಯನ್ನು ವ್ಯಕ್ತಪಡಿಸಿತು. ಆದ್ದರಿಂದ ಈ ಕಾಯ್ದೆಯನ್ನು ಸ್ಥಳೀಯ ಸರ್ಕಾರದ ಇತಿಹಾಸದಲ್ಲಿ ಒಂದು ಮೈಲಿಗಲ್ಲು ಎಂದು ಪರಿಗಣಿಸಲಾಗಿದೆ.

### ಕರ್ನಾಟಕ ಪಂಚಾಯತ್ ರಾಜ್ ಕಾಯ್ದೆ- 1993

73 ನೇ ಸಂವಿಧಾನ ತಿದ್ದುಪಡಿ ಕಾಯ್ದೆಗೆ ಅನುಗುಣವಾಗಿ ಕರ್ನಾಟಕ ಸರ್ಕಾರವು 1993 ರಲ್ಲಿ ಹೊಸ ಪಂಚಾಯತ್ ರಾಜ್ ಕಾಯ್ದೆಯನ್ನು ಅಳವಡಿಸಿಕೊಂಡಿತು. ಇದರ ಪ್ರಮುಖ ಲಕ್ಷಣಗಳು ಈ ಕೆಳಕಂಡಂತಿವೆ.

a. ಪಂಚಾಯತ್ ರಾಜ್ ಸಂಸ್ಥೆಗಳಿಗೆ ಪ್ರತ್ಯಕ್ಷ ಚುನಾವಣೆ

b. ಪ್ರತಿ 5000 ದಿಂದ 7000 ಜನಸಂಖ್ಯೆಗೆ ಒಂದು ಗ್ರಾಮ ಪಂಚಾಯಿತಿ ರಚನೆಯಾಗತಕ್ಕದ್ದೆಂದು ತಿಳಿಸುತ್ತದೆ. ಅದರಂತೆಯೇ ಪ್ರತಿ 400 ಜನಸಂಖ್ಯೆಗೆ ಒಬ್ಬ ಸದಸ್ಯರನ್ನು ಆಯ್ಕೆ ಮಾಡಲು ಅವಕಾಶವಿರುತ್ತದೆ.

c. ಗ್ರಾಮ ಪಂಚಾಯಿತಿಗಳಿಗೆ ಪಕ್ಷ ರಹಿತ ಚುನಾವಣೆ

d. ಜನಸಂಖ್ಯೆ ಪ್ರಮಾಣವನ್ನು ಆಧರಿಸಿ ಪರಿಶಿಷ್ಟ ಜಾತಿಗೆ ಶೇ. 15 ಪರಿಶಿಷ್ಟ ಪಂಗಡಗಳಿಗೆ ಶೇ. 3 ಮಹಿಳೆಯರಿಗೆ ಶೇಕಡ 50 ರಷ್ಟು ಮತ್ತು ಹಿಂದುಳಿಗ ವರ್ಗಗಳಿಗೆ 1/ 3 ರಷ್ಟು ಸ್ಥಾನಗಳನ್ನು ಮೀಸಲಿಡುವುದು.

e. ಪಂಚಾಯತ್ ರಾಜ್ ಸಂಸ್ಥೆಗಳಿಗೆ ಹೆಚ್ಚಿನ ಸ್ವಾಯತ್ತತೆ ನೀಡುವುದು.

f. ಮೂರು ಹಂತದ ಪಂಚಾಯತ್ ರಾಜ್ ವ್ಯವಸ್ಥೆಯನ್ನು ಅಳವಡಿಸುವುದು. ಅವುಗಳೆಂದರೆ;

1. ಜಿಲ್ಲಾ ಮಟ್ಟದಲ್ಲಿ ಜಿಲ್ಲಾ ಪಂಚಾಯತ್
2. ತಾಲ್ಲೂಕು ಮಟ್ಟದಲ್ಲಿ ತಾಲ್ಲೂಕು ಪಂಚಾಯಿತಿ
3. ಗ್ರಾಮ ಮಟ್ಟದಲ್ಲಿ ಗ್ರಾಮ ಪಂಚಾಯಿತಿ

## ಜಿಲ್ಲಾ ಪಂಚಾಯಿತಿ:

ಸಂವಿಧಾನದ 243 (ಸಿ) ವಿಧಿಯನ್ವಯ ರಾಜ್ಯಗಳು ಜಿಲ್ಲಾ ಮಟ್ಟದಲ್ಲಿ ಜಿಲ್ಲಾ ಪಂಚಾಯಿತಿಗಳ ರಚನೆಗೆ ಅವಕಾಶವಿದೆ. ಪುರಸಭೆ ಅಥವಾ ನಗರಸಭೆ ಅಥವಾ ಪಟ್ಟಣ ಪಂಚಾಯಿತಿಗಳ ವ್ಯಾಪ್ತಿಯನ್ನು ಹೊರತುಪಡಿಸಿ ಜಿಲ್ಲೆಯ ಎಲ್ಲಾ ಗ್ರಾಮೀಣ ಪ್ರದೇಶಗಳೂ ಜಿಲ್ಲಾ ಪಂಚಾಯಿತಿ ಅಧಿಕಾರ ವ್ಯಾಪಿಗೆ ಒಳಪಟ್ಟಿವೆ.

### *ರಚನೆ:*

ಕರ್ನಾಟಕದಲ್ಲಿ ಜಿಲ್ಲಾ ಪಂಚಾಯಿತಿಯ ರಚನೆ ಇಂತಿದೆ.

**1. ಸದಸ್ಯತ್ವ**- ಜಿಲ್ಲಾ ಪಂಚಾಯಿತಿಯ ಸದಸ್ಯರ ಸಂಖ್ಯೆಯನ್ನು ಜಿಲ್ಲೆಯ ಗ್ರಾಮೀಣ ಪ್ರದೇಶಗಳ ಜನಸಂಖ್ಯೆಯ ಪ್ರಮಾಣಕ್ಕನುಗುಣವಾಗಿ ನಿರ್ಧರಿಸಲಾಗುತ್ತದೆ.

ಪ್ರತಿ ಜಿಲ್ಲಾ ಪಂಚಾಯಿತಿಯು 40,000 ಜನರಿಗೆ ಒಬ್ಬ ಪ್ರತಿನಿಧಿಯನ್ನು ಹೊಂದಿರತಕ್ಕದ್ದು. ಆದರೆ ಉತ್ತರಕನ್ನಡ ಜಿಲ್ಲಾ ಪಂಚಾಯಿತಿಯಲ್ಲಿ ಒಬ್ಬ ಸದಸ್ಯನು 30,000 ಜನರನ್ನು ಪ್ರತಿನಿಧಿಸುತ್ತಿದ್ದರೆ, ಚಿಕ್ಕಮಗಳೂರು ಹಾಗೂ ಕೊಡಗು ಜಿಲ್ಲೆಗಳಲ್ಲಿ 18,000 ಜನರಿಗೆ ಒಬ್ಬ ಸದಸ್ಯರಿರುತ್ತಾರೆ.

ಜಿಲ್ಲಾ ಪಂಚಾಯಿತಿಯು ಕೆಳಕಂಡ ಸದಸ್ಯರುಗಳನ್ನು ಒಳಗೊಂಡಿರುತ್ತದೆ.

1. ಜಿಲ್ಲಾ ಪಂಚಾಯಿತಿ ಚುನಾಯಿತ ಸದಸ್ಯರು
2. ಜಿಲ್ಲೆಯನ್ನು ಪ್ರತಿನಿಧಿಸುವ ಲೋಕಸಭಾ ಹಾಗೂ ವಿಧಾನಸಭಾ ಸದಸ್ಯರು
3. ಜಿಲ್ಲೆಯನ್ನು ಪ್ರತಿನಿಧಿಸುವ ರಾಜ್ಯಸಭೆ ಮತ್ತು ವಿಧಾನಪರಿಷತ್ ಸದಸ್ಯರು
4. ಜಿಲ್ಲಾ ಪಂಚಾಯತಿ ವ್ಯಾಪ್ತಿಯಲ್ಲಿ ಬರುವ ಎಲ್ಲಾ ತಾಲ್ಲೂಕು ಪಂಚಾಯಿತಿಗಳ ಅಧ್ಯಕ್ಷರುಗಳು ಮೇಲ್ಕಂಡ ಎಲ್ಲಾ ಸದಸ್ಯರು ಜಿಲ್ಲಾ ಪಂಚಾಯಿತಿ ಸಭೆಗಳಲ್ಲಿ ಭಾಗವಹಿಸುವ ಮತ್ತು ಮತ ಚಲಾಯಿಸುವ ಹಕ್ಕನ್ನು ಹೊಂದಿರುತ್ತಾರೆ.

**2. ಚುನಾವಣೆ:** ಜಿಲ್ಲಾ ಪಂಚಾಯಿತಿ ಸದಸ್ಯರನ್ನು ಜಿಲ್ಲೆಯ ಗ್ರಾಮೀಣ ಪ್ರದೇಶದಲ್ಲಿ ವಾಸವಿರುವ ಪ್ರಜೆಗಳು ವಯಸ್ಕ ಮತದಾನ ಪದ್ಧತಿಯ ಮೂಲಕ ಪ್ರತ್ಯಕ್ಷವಾಗಿ ಚುನಾಯಿಸುತ್ತಾರೆ. ಏಕ ವ್ಯಕ್ತಿ, ಏಕ ಮತ ತತ್ವ ಹಾಗೂ ರಹಸ್ಯ ಮತದಾನ ಪದ್ಧತಿಯನ್ನು ಈ ಚುನಾವಣೆಯಲ್ಲಿ ಅನುಸರಿಸಲಾಗುತ್ತದೆ.

**3. ಮೀಸಲಾತಿ:** ಜಿಲ್ಲಾ ಪಂಚಾಯಿತಿಯ ಒಟ್ಟು ಸ್ಥಾನಗಳಲ್ಲಿ ಪರಿಶಿಷ್ಟ ಜಾತಿಗೆ ಶೇ. 15 ಪರಿಶಿಷ್ಟ ಪಂಗಡಕ್ಕೆ ಶೇ. 3 ಹಾಗೂ ಇತರೆ ಹಿಂದುಳಿದ ವರ್ಗಗಳಿಗೆ 1/ 3 ರಷ್ಟು ಸ್ಥಾನಗಳನ್ನು ಮತ್ತು ಮಹಿಳೆಯರಿಗೆ ಶೇಕಡ 50 ರಷ್ಟು ಸ್ಥಾನಗಳನ್ನು ಮೀಸಲಿಡಲಾಗಿದೆ.

**4. ಅಧಿಕಾರಾವಧಿ:** ಜಿಲ್ಲಾ ಪಂಚಾಯಿತಿಯ ಸದಸ್ಯರ ಅಧಿಕಾರವಧಿ 5 ವರ್ಷ

**5. ಪದಾಧಿಕಾರಿಗಳು:** ಜಿಲ್ಲಾ ಪಂಚಾಯಿತಿ ಸದಸ್ಯರು ತಮ್ಮಲ್ಲಿಯೇ ಒಬ್ಬರನ್ನು ಅಧ್ಯಕ್ಷರನ್ನಾಗಿ ಮೊತ್ತೊಬ್ಬರನ್ನು ಉಪಾಧ್ಯಕ್ಷರನ್ನಾಗಿ ಮೀಸಲಾತಿಯ ಆಧಾರದ ಮೇಲೆ ಆಯ್ಕೆ ಮಾಡುತ್ತಾರೆ. ಇವರ ಅಧಿಕಾರವಧಿ 30 ತಿಂಗಳು ಅಧ್ಯಕ್ಷ ಮತ್ತು ಉಪಾಧ್ಯಕ್ಷರುಗಳು ರಾಜಕೀಯ ಮುಖ್ಯಸ್ಥರಾದರೆ ಮುಖ್ಯ ಕಾರ್ಯನಿರ್ವಹಣಾಧಿಕಾರಿಯು ಜಿಲ್ಲಾ ಪಂಚಾಯಿತಿಯ ಆಡಳಿತದ ಮುಖ್ಯಸ್ಥರಾಗಿರುತ್ತಾರೆ.

**6. ಸಭೆಗಳು:** ಜಿಲ್ಲಾ ಪಂಚಾಯಿತಿಯ ಸಭೆಗಳು ಎರಡು ತಿಂಗಳಿಗೊಮ್ಮೆಯಾದರೂ ಅಗತ್ಯವಾಗಿ ನಡೆಯಲೇಬೇಕು. ಆದರೆ ಎರಡು ಸಭೆಗಳ ನಡುವಿನ ಅಂತರ ಆರು ತಿಂಗಳು ಮೀರಬಾರದು. ಸಭೆಯ ಕೋರಂ ಒಟ್ಟು ಸದಸ್ಯರ 1/ 3 ರಷ್ಟು ಆಗಿದೆ.

**7. ಸ್ಥಾಯಿ ಸಮಿತಿಗಳು:**

1. ಸಾಮಾನ್ಯ ಸ್ಥಾಯಿ ಸಮಿತಿ.
2. ಹಣಕಾಸು ಲೆಕ್ಕ ಮತ್ತು ಯೋಜನಾ ಸಮಿತಿ.
3. ಸಾಮಾಜಿಕ ನ್ಯಾಯ ಸಮಿತಿ.
4. ಶಿಕ್ಷಣ- ಆರೋಗ್ಯ ಸ್ಥಾಯಿ ಸಮಿತಿ.
5. ಕೃಷಿ ಮತ್ತು ಕೈಗಾರಿಕಾ ಸ್ಥಾಯಿ ಸಮಿತಿ.

**8. ಹಣಕಾಸಿನ ಮೂಲಗಳು:**

1. ರಾಜ್ಯ ಸರ್ಕಾರದ ಸಂಚಿತ ನಿಧಿಯಿಂದ ಜಿಲ್ಲಾ ಪಂಚಾಯಿತಿಗೆ ವರ್ಗಾಯಿಸಲ್ಪಟ್ಟ ಹಣ.
2. ರಾಜ್ಯ ಸರ್ಕಾರದಿಂದ ನೀಡಲಾದ ಅನುದಾನ, ಸಾಲಗಳು ಹಾಗೂ ವಂತಿಗೆಗಳು.
3. ಜಿಲ್ಲಾ ಪಂಚಾಯಿತಿಯಿಂದ ವಿಧಿಸಲ್ಪಟ್ಟ ತೆರಿಗೆ, ಶುಲ್ಕ ಹಾಗೂ ಜುಲ್ಮಾನೆಗಳಿಂದ ಬರುವ ಆದಾಯ.

4. ಜಿಲ್ಲಾ ಪಂಚಾಯಿತಿಯ ಆಸ್ತಿಯ ಮಾರಾಟ ಹಾಗೂ ಬಾಡಿಗೆಯಿಂದ ಬರುವ ಆದಾಯ.

### *1. ಜಿಲ್ಲಾ ಪಂಚಾಯಿತಿಯ ಕಾರ್ಯಗಳು:*

1. ಇಡೀ ಜಿಲ್ಲೆಯಲ್ಲಿ ನಡೆಯುವ ಅಭಿವೃದ್ಧಿ ಕಾರ್ಯಗಳ ಮೇಲ್ವಿಚಾರಣೆ, ಸಮನ್ವಯ ಮತ್ತು ನಿರ್ದೇಶನ.
2. ಕೃಷಿ ಮತ್ತು ತೋಟಗಾರಿಕೆಗೆ ಪ್ರೋತ್ಸಾಹ ಹಾಗೂ ಭೂ ಅಭಿವೃದ್ಧಿ ಮತ್ತು ಮಣ್ಣಿನ ಸಂರಕ್ಷಣೆ.
3. ಪಶು ಸಂಗೋಪನೆ, ಹೈನುಗಾರಿಕೆ, ಕೋಳಿಸಾಕಾಣಿಕೆ ಮತ್ತು ಮೀನುಗಾರಿಕೆಗೆ ಪ್ರೋತ್ಸಾಹ.
4. ಸಣ್ಣ ನೀರಾವರಿ ಯೋಜನೆಗಳ ಅನುಷ್ಠಾನ.
5. ಗ್ರಾಮೀಣ ಮತ್ತು ಗೃಹ ಕೈಗಾರಿಕೆಗಳಿಗೆ ಪ್ರೋತ್ಸಾಹ.
6. ಗ್ರಾಮೀಣ ವಸತಿ ಯೋಜನೆಗಳು ಮತ್ತು ಬಡತನ ನಿರ್ಮೂಲನಾ ಕಾರ್ಯಕ್ರಮಗಳ ಅನುಷ್ಠಾನ.
7. ಜಿಲ್ಲೆಯಲ್ಲಿ ರಸ್ತೆ, ಸೇತುವೆ ಹಾಗೂ ಇತರೆ ಸಂಪರ್ಕ ಸೌಲಭ್ಯಗಳ ನಿರ್ಮಾಣ.
8. ಪ್ರಾಥಮಿಕ ಮತ್ತು ಪ್ರೌಢಶಾಲೆಗಳ ಸ್ಥಾಪನೆಯ ಮೂಲಕ ಜಿಲ್ಲಾ ಮಟ್ಟದಲ್ಲಿ ಶೈಕ್ಷಣಿಕ ಚಟುವಟಿಕೆಗಳನ್ನು ಪ್ರೋತ್ಸಾಹಿಸುವುದು.
9. ಮಹಿಳೆಯರು ಮತ್ತು ಮಕ್ಕಳ ಅಭಿವೃದ್ಧಿ ಕಾರ್ಯಕ್ರಮಗಳನ್ನು ಅನುಷ್ಠಾನಗೊಳಿಸುವುದು.
10. ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಯೋಜನೆಗಳನ್ನು ಅನುಷ್ಠಾನಗೊಳಿಸುವುದು.
11. ಸಾರ್ವಜನಿಕ ವಿತರಣಾ ವ್ಯವಸ್ಥೆಯನ್ನು ಪರಿಣಾಮಕಾರಿಯಾಗಿ ಅನುಷ್ಠಾನಗೊಳಿಸುವುದು.
12. ಸಹಕಾರ ಕ್ಷೇತ್ರದ ಚಟುವಟಿಕೆಗಳು ಮತ್ತು ಸಾಮಾಜಿಕ-ಸಾಂಸ್ಕೃತಿಕ ಚಟುವಟಿಕೆಗಳನ್ನು ಪ್ರೋತ್ಸಾಹಿಸುವುದು.
13. ಪರಿಶಿಷ್ಟ, ಜಾತಿ, ವರ್ಗ ಹಾಗೂ ಇತರೆ ಹಿಂದುಳಿದ ವರ್ಗಗಳ ಶೈಕ್ಷಣಿಕ, ಆರ್ಥಿಕ ಹಾಗೂ ಸಾಮಾಜಿಕ ಅಭಿವೃದ್ಧಿಗೆ ಪ್ರೋತ್ಸಾಹ.
14. ವಯಸ್ಕರ ಮತ್ತು ಅನೌಪಚಾರಿಕ ಶಿಕ್ಷಣಕ್ಕೆ ಒತ್ತು ನೀಡುವುದು.
15. ಜಿಲ್ಲೆಯಲ್ಲಿ ಪ್ರಮುಖವಾದ ಜಾತ್ರೆ, ಹಬ್ಬ, ಹರಿದಿನಗಳು ಮತ್ತು ಮಾರುಕಟ್ಟೆಗಳನ್ನು ನಿಯಂತ್ರಿಸುವುದು.

16. ಗ್ರಾಮೀಣ ಪ್ರದೇಶದಲ್ಲಿ ಸಮರ್ಪಕವಾಗಿ ವಿದ್ಯುತ್ ಪೂರೈಸುವ ವ್ಯವಸ್ಥೆ ಮಾಡುವುದು.
17. ಸಮುದಾಯದ ಆಸ್ತಿಗಳನ್ನು ಸಂರಕ್ಷಿಸುವುದು.
18. ಗ್ರಂಥಾಲಯಗಳ ಸ್ಥಾಪನೆ ಹಾಗೂ ನಿರ್ವಹಣೆ.
19. ಕುಡಿಯುವ ನೀರಿನ ಪೂರೈಕೆ ಮತ್ತು ಗ್ರಾಮೀಣ ನೈರ್ಮಲ್ಯೀಕರಣ.
20. ಗ್ರಾಮೀಣ ಕರಕುಶಲ ಕೈಗಾರಿಕೆಯನ್ನು ಪ್ರೋತಾಹಿಸುವುದು ಮತ್ತು ವೃತ್ತಿ ಶಿಕ್ಷಣ ತರಬೇತಿ ಕೇಂದ್ರಗಳನ್ನು ತೆರೆಯುವುದು. ಇವೆಲ್ಲವುಗಳು ಜಿಲ್ಲಾ ಪಂಚಾಯಿತಿಯ ಪ್ರಮುಖ ಕಾರ್ಯಗಳಾಗಿವೆ.

### *2. ತಾಲ್ಲೂಕು ಪಂಚಾಯಿತಿ*

1993 ನೇ ಪಂಚಾಯತ್ ರಾಜ್ಯ ಅಧಿನಿಯಮದನ್ವಯ ಸ್ಥಾಪಿತಗೊಂಡ ಮೂರು ಹಂತದ ಪಂಚಾಯಿತಿ ವ್ಯವಸ್ಥೆಯಲ್ಲಿ ತಾಲ್ಲೂಕು ಪಂಚಾಯಿತಿಯು ಮಾಧ್ಯಮಿಕ ಹಂತವಾಗಿದೆ. ಪುರಸಭೆ ಅಥವಾ ನಗರಸಭೆ ಅಥವಾ ಪಟ್ಟಣ ಪಂಚಾಯಿತಿಯ ವ್ಯಾಪ್ತಿಯಲ್ಲಿರುವ ಪ್ರದೇಶಗಳನ್ನು ಹೊರತುಪಡಿಸಿ ತಾಲ್ಲೂಕಿನ ಇತರ ಗ್ರಾಮೀಣ ಪ್ರದೇಶಗಳೆಲ್ಲವೂ ತಾಲ್ಲೂಕು ಪಂಚಾಯಿತಿ ವ್ಯಾಪ್ತಿಯಲ್ಲಿ ಬರುತ್ತವೆ. ತಾಲ್ಲೂಕು ಪಂಚಾಯಿತಿಯ ಸದಸ್ಯರ ಸಂಖ್ಯೆಯನ್ನು ತಾಲ್ಲೂಕಿನ ಗ್ರಾಮೀಣ ಪ್ರದೇಶದ ಜನಸಂಖ್ಯೆಯ ಪ್ರಮಾಣಕ್ಕೆ ಅನುಗುಣವಾಗಿ ನಿರ್ಧರಿಸಲಾಗುತ್ತದೆ.

**ರಚನೆ**- 1993 ನೇ ಪಂಚಾಯತ್ ರಾಜ್ ಕಾಯ್ದೆ ಪ್ರಕಾರ ತಾಲ್ಲೂಕು ಪಂಚಾಯಿತಿ ಪ್ರತಿ ಹತ್ತು ಸಾವಿರ ಜನಸಂಖ್ಯೆಗೆ ಒಬ್ಬ ಪ್ರತಿನಿಧಿಯನ್ನು ಹೊಂದಿರಬೇಕು. ಒಂದು ಲಕ್ಷ ಜನಸಂಖ್ಯೆಯನ್ನು ಮೀರದ ತಾಲ್ಲೂಕು ಪಂಚಾಯಿತಿಗಳು ಕನಿಷ್ಠ 11 ಮಂದಿ ಸದಸ್ಯರನ್ನು ಹೊಂದಿರಬಹುದು.

### ತಾಲ್ಲೂಕು ಪಂಚಾಯಿತಿಯು ಈ ಕೆಳಕಂಡ ಸದಸ್ಯರನ್ನು ಹೊಂದಿರುತ್ತದೆ.

1. ಜನರಿಂದ ಸಾರ್ವತ್ರಿಕ ವಯಸ್ಕ ಮತದಾನದ ಮೂಲಕ ನೇರವಾಗಿ ಆಯ್ಕೆಯಾದ ಚುನಾಯಿತ ಸದಸ್ಯರು.
2. ತಾಲ್ಲೂಕನ್ನು ಪ್ರತಿನಿಧಿಸುವ ಲೋಕಸಭಾ ಮತ್ತು ರಾಜ್ಯಸಭಾ ಸದಸ್ಯರು.
3. ತಾಲ್ಲೂಕನ್ನು ಪ್ರತಿನಿಧಿಸುವ ವಿಧಾನಸಭೆ ಮತ್ತು ವಿಧಾನ ಪರಿಷತ್ ಸದಸ್ಯರು.
4. ತಾಲ್ಲೂಕು ಪಂಚಾಯಿತಿ ವ್ಯಾಪ್ತಿಯಲ್ಲಿ ಬರುವ 1/ 5 ರಷ್ಟು ಗ್ರಾಮ ಪಂಚಾಯಿತಿಗಳ ಅಧ್ಯಕ್ಷರು.

ಇವರನ್ನು ಸಹಾಯಕ ಆಯುಕ್ತರು ಆವರ್ತನೆಯ ಆಧಾರದ ಮೇರೆಗೆ ಒಂದು ವರ್ಷದ ಅವಧಿಗೆ ಆಯ್ಕೆ ಮಾಡುತ್ತಾರೆ. ಮೇಲ್ಕಂಡ ಎಲ್ಲಾ ಸದಸ್ಯರು ತಾಲ್ಲೂಕು ಪಂಚಾಯಿತಿಯ ಸಭೆಗಳಲ್ಲಿ ಭಾಗವಹಿಸುವ ಹಾಗು ಮತ ಚಲಾಯಿಸುವ ಹಕ್ಕನ್ನು ಹೊಂದಿದ್ದಾರೆ. ಜಿಲ್ಲಾ ಪಂಚಾಯಿತಿಯ ರಚನೆ ಅವದಿ ಮತ್ತು ಕಾರ್ಯಾಧಿಕಾರಗಳಂತೆಯೇ ತಾಲ್ಲೂಕು ಪಂಚಾಯಿತಿಯ ರಚನೆ ಅವಧಿ ಮತ್ತು ಕಾರ್ಯಾಧಿಕಾರಗಳೂ ಇವೆ.

*ಗ್ರಾಮ ಪಂಚಾಯಿತಿ*

ಗ್ರಾಮಗಳೇ ಪ್ರಜಾಸತ್ತಾತ್ಮಕ ಗಣರಾಜ್ಯದ ಮೂಲ ಘಟಕಗಳಾಗಿವೆ. ಆದ್ದರಿಂದ ಗ್ರಾಮಗಳನ್ನು ಪುಟ್ಟ ಗಣರಾಜ್ಯಗಳೆಂದು ವರ್ಣಿಸಲಾಗಿದೆ. ಗ್ರಾಮ ಪಂಚಾಯಿತಿ ಗ್ರಾಮಗಳ ಸರ್ವಾಂಗೀಣ ಅಭಿವೃದ್ಧಿಯ ಸಾಧನವಾಗಿದೆ. ಆದ್ದರಿಂದ ಗ್ರಾಮ ಪಂಚಾಯಿತಿಯ ಬಗೆಗೆ ತಿಳಿದುಕೊಳ್ಳುವುದು ಅವಶ್ಯಕ. ಪಂಚಾಯತ್ ರಾಜ್ಯ ಅಧಿನಿಯಮ 1993 ರ ಪ್ರಕಾರ ಗ್ರಾಮ ಪಂಚಾಯಿತಿಯು ಗ್ರಾಮೀಣ ಸ್ಥಳೀಯ ಸರ್ಕಾರದ ಮೊದಲ ಮೆಟ್ಟಿಲಾಗಿದೆ.

ಈ ಕಾಯ್ದೆಯ ಪ್ರಕಾರ 5000 ದಿಂದ 7000 ಜನಸಂಖ್ಯೆಯನ್ನು ಒಳಗೊಂಡ ಗ್ರಾಮ ಅಥವಾ ಗ್ರಾಮಗಳ ಸಮೂಹವನ್ನು ಗ್ರಾಮಪಂಚಾಯಿತಿ ಎಂದು ಪರಿಗಣಿಸಲಾಗಿದೆ. ಮಲೆನಾಡಿಗೆ ಒಳಪಡುವ ಜಿಲ್ಲೆಗಳಲ್ಲಿ 2000 ಜನಸಂಖ್ಯೆ ಹೊಂದಿರುವ ಗ್ರಾಮ ಸಮೂಹಕ್ಕೆ ಗ್ರಾಮ ಪಂಚಾಯಿತಿ ರಚನೆಗೆ ಅವಕಾಶ ಕಲ್ಪಿಸಿದೆ. ಪ್ರತಿ 400 ಜನರಿಗೆ ಒಬ್ಬ ಪ್ರತಿನಿಧಿಯನ್ನು ಆಯ್ಕೆ ಮಾಡಬಹುದು. ಇವರ ಅಧಿಕಾರವಧಿ 5 ವರ್ಷಗಳು.

ಚುನಾಯಿತ ಸದಸ್ಯರು ಒಬ್ಬರನ್ನು ಅಧ್ಯಕ್ಷರನ್ನಾಗಿ ಮೊತ್ತೊಬ್ಬರನ್ನು ಉಪಾಧ್ಯಕ್ಷರನ್ನಾಗಿ 30 ತಿಂಗಳ ಅವಧಿಗೆ ಆಯ್ಕೆ ಮಾಡಿಕೊಳ್ಳುತ್ತಾರೆ. ಪಂಚಾಯಿತಿ ಅಭಿವೃದ್ಧಿ ಅಧಿಕಾರಿಯು (Panchayat Development Officer) ಗ್ರಾಮ ಪಂಚಾಯಿತಿಯ ಆಡಳಿತದ ಮುಖ್ಯಸ್ಥರಾಗಿ ಕಾರ್ಯನಿರ್ವಹಿಸುತ್ತಾರೆ. ಪರಿಶಿಷ್ಟ ಜಾತಿ, ಪರಿಶಿಷ್ಟ ಪಂಗಡ, ಹಿಂದುಳಿದ ವರ್ಗ ಮತ್ತು ಮಹಿಳೆಯರಿಗೆ ಮೀಸಲಾತಿಯನ್ನು ನಿಗದಿಪಡಿಸಲಾಗಿದೆ.

ಗ್ರಾಮ ಪಂಚಾಯಿತಿಯು ಕನಿಷ್ಟ 2 ತಿಂಗಳಿಗೊಮ್ಮೆಯಾದರೂ ಸಭೆ ಸೇರಬೇಕು. ಅಧ್ಯಕ್ಷರು ಈ ಸಭೆಯ ಅಧ್ಯಕ್ಷತೆ ವಹಿಸುತ್ತಾರೆ. ಪರಿಣಾಮಕಾರಿ ಆಡಳಿತಕ್ಕಾಗಿ ಸ್ಥಾಯಿ ಸಮಿತಿಗಳನ್ನು ರಚಿಸಿಕೊಳ್ಳಲು ಅವಕಾಶವಿದೆ. ಅವುಗಳೆಂದರೆ.

**1. ಉತ್ಪಾದನಾ ಸಮಿತಿ:** ಕೃಷಿ, ಹೈನುಗಾರಿಕೆ, ಗ್ರಾಮೀಣ ಕೈಗಾರಿಕೆಗಳು ಮತ್ತು ಬಡತನ ನಿರ್ಮೂಲನೆಗೆ ಯೋಜನೆಗಳನ್ನು ರೂಪಿಸಿ ಅನುಷ್ಠಾನಗೊಳಿಸುವುದು.

**2. ಸಾಮಾಜಿಕ ನ್ಯಾಯ ಸಮಿತಿ:** ಪರಿಶಿಷ್ಟ ಜಾತಿ, ಪರಿಶಿಷ್ಟ ವರ್ಗ ಮತ್ತು ಮಹಿಳಾ ಸಮುದಾಯಕ್ಕೆ ಸೇರಿದ ಕನಿಷ್ಟ ಒಬ್ಬೊಬ್ಬ ಸದಸ್ಯರನ್ನು ಹೊಂದಿರಬೇಕು. ಸಾಮಾಜಿಕ ಆರ್ಥಿಕ ಮತ್ತು ಶೈಕ್ಷಣಿಕ ಹಿತಾಸಕ್ತಿಯನ್ನು ಕಾಪಾಡುವುದು ಇದರ ಮುಖ್ಯ ಉದ್ದೇಶವಾಗಿದೆ.

**3. ಸೌಲಭ್ಯಗಳ ಸಮಿತಿ:** ಶಿಕ್ಷಣ, ಸಾರ್ವಜನಿಕ ಆರೋಗ್ಯ ನೈರ್ಮಲ್ಯ.

ಗ್ರಾಮ ಪಂಚಾಯಿತಿಯ ಕಾರ್ಯಗಳು:

1. ಗ್ರಾಮ ಪಂಚಾಯಿತಿ ವ್ಯಾಪ್ತಿಯಲ್ಲಿ ಬರುವ ಹಳ್ಳಿಗಳ ಅಭಿವೃದ್ಧಿಗಾಗಿ ವಾರ್ಷಿಕ ಯೋಜನೆಗಳನ್ನು ಸಿದ್ಧಪಡಿಸುವುದು.
2. ಕೃಷಿ, ಪಶು ಸಂಗೋಪನೆ, ಹೈನುಗಾರಿಕೆ, ಮೀನುಗಾರಿಕೆಯನ್ನು ಅಭಿವೃದ್ಧಿಪಡಿಸುವುದು.
3. ಗ್ರಾಮೀಣ ಮತ್ತು ಗೃಹ ಕೈಗಾರಿಕೆಗಳಿಗೆ ಪ್ರೋತ್ಸಾಹ ನೀಡುವುದು.

4. ಕುಡಿಯುವ ನೀರಿನ ಪೂರೈಕೆ ಮತ್ತು ಜಲ ಮಾಲಿನ್ಯ ನಿಯಂತ್ರಣ.
5. ಬಡತನ ನಿರ್ಮೂಲನಾ ಕಾರ್ಯಕ್ರಮಗಳ ಅನುಷ್ಠಾನ.
6. ಗ್ರಂಥಾಲಯ ನಿರ್ಮಾಣ ಮತ್ತು ನಿರ್ವಹಣೆ.
7. ಹಬ್ಬ ಹರಿದಿನ, ಜಾತ್ರೆ, ದನಗಳ ಜಾತ್ರೆಗಳನ್ನು ನಿಯಂತ್ರಿಸುವುದು.
8. ವಯಸ್ಕರ ಶಿಕ್ಷಣ ಮತ್ತು ಅನೌಪಚಾರಿಕ ಶಿಕ್ಷಣಕ್ಕೆ ಪ್ರೋತ್ಸಾಹ.
9. ಮಹಿಳೆಯರ ಮತ್ತು ಮಕ್ಕಳ ಅಭಿವೃದ್ಧಿ.
10. ಅಸಂಪ್ರದಾಯಿಕ ಇಂಧನ ಮೂಲಗಳನ್ನು ಅಭಿವೃದ್ಧಿಪಡಿಸುವುದು.
11. ಸಾರ್ವಜನಿಕ ಉದ್ಯಾನವನಗಳು ಮತ್ತು ಆಟದ ಮೈದಾನಗಳ ಸಂರಕ್ಷಣೆ.
12. ಸಾರ್ವಜನಿಕ ಪಡಿತರ ವಿತರಣಾ ವ್ಯವಸ್ಥೆಯ ಮೇಲ್ವಿಚಾರಣೆ ಮಾಡುವುದು.
13. ಅಂಗವಿಕಲರ ಯೋಗಕ್ಷೇಮವನ್ನು ನೋಡಿಕೊಳ್ಳುವುದು.
14. ಗ್ರಾಮೀಣ ನೈರ್ಮಲ್ಯಕ್ಕೆ ಪ್ರೋತ್ಸಾಹ.

### ಗ್ರಾಮ ಸಭೆ:

ಗ್ರಾಮ ಸಭೆಯು ಗ್ರಾಮೀಣ ಸ್ವಯಂ ಆಡಳಿತ ಸಂಸ್ಥೆಯ ಪ್ರಾಥಮಿಕ ಘಟಕವಾಗಿದೆ. ಒಂದು ಗ್ರಾಮದಲ್ಲಿ ಗ್ರಾಮ ಪಂಚಾಯಿತಿಯ ನೊಂದಾಯಿತ ಮತದಾರರೆಲ್ಲರೂ ಗ್ರಾಮಸಭೆಯ ಸದಸ್ಯರಾಗಿರುತ್ತಾರೆ. ಸಂಬಂಧಪಟ್ಟ ಗ್ರಾಮ ಪಂಚಾಯಿತಿ ಅಧ್ಯಕ್ಷರು ಪದನಿಮಿತ್ತ ಅಧ್ಯಕ್ಷರಾಗಿರುತ್ತಾರೆ. ಗ್ರಾಮ ಸಭೆಯನ್ನು ವರ್ಷದಲ್ಲಿ ಕನಿಷ್ಠ 2 ಬಾರಿ ಕರೆಯಲಾಗುತ್ತದೆ. ಹಳ್ಳಿಯ ಅಭಿವೃದ್ಧಿಗೆ ಸಂಬಂಧಿಸಿದ ಯೋಜನೆಗಳನ್ನು ಸಿದ್ಧಪಡಿಸುವುದು. ವಿವಿಧ ಯೋಜನೆಗಳಿಗೆ ಅರ್ಹ ಫಲಾನುಭವಿಗಳನ್ನು ಗುರುತಿಸಿ ಆಯ್ಕೆ ಮಾಡುವುದು. ಅವುಗಳನ್ನು ಸಂಬಂಧಪಟ್ಟ ತಾಲ್ಲೂಕು ಮತ್ತು ಜಿಲ್ಲಾ ಪಂಚಾಯಿತಿಗಳ ಒಪ್ಪಿಗೆಗೆ ಕಳುಹಿಸುವುದು ಗ್ರಾಮ ಸಭೆಗಳ ಅತ್ಯಂತ ಮುಖ್ಯ ಕಾರ್ಯಗಳಾಗಿವೆ. ಹಳ್ಳಿಯ ಜನರ ಯೋಗಕ್ಷೇಮಕ್ಕಾಗಿ ಕೆಲಸ ಮಾಡುವುದು. ಸ್ವಚ್ಛತೆ ಕಾಪಾಡುವುದು ಹಾಗೂ ಒಳಚರಂಡಿ ವ್ಯವಸ್ಥೆಯ ನಿರ್ಮಾಣ ಮತ್ತು ನಿರ್ವಹಣೆ ಇವುಗಳು ಗ್ರಾಮಸಭೆಯ ಮಹತ್ವದ ಜವಾಬ್ದಾರಿಗಳಾಗಿವೆ.

### *ನಗರ ಸ್ಥಳೀಯ ಸಂಸ್ಥೆಗಳು:*

ನಗರ ಸ್ಥಳೀಯ ಸಂಸ್ಥೆಗಳ ಆಡಳಿತಕ್ಕೆ ಸಂಬಂಧಿಸಿದಂತೆ ಸಂವಿಧಾನ 74 ನೇ ತಿದ್ದುಪಡಿಯ ಪ್ರಕಾರ IX (A) ಭಾಗದಲ್ಲಿ 243P ವಿಧಿಯಿಂದ 243ZG ವಿಧಿಯವರೆಗೆ ನಿಯಮಗಳನ್ನು ರೂಪಿಸಲಾಗಿದೆ. ಕರ್ನಾಟಕದಲ್ಲಿ 1964 ರ ಕರ್ನಾಟಕ ಮುನಿಪಲ್ ಕಾಯಿದೆ ಮತ್ತು 1976 ರ ಕರ್ನಾಟಕ ಮುನಿಪಲ್ ಕಾರ್ಪೋರೇಷನ್ ಕಾಯಿದೆಗಳ ತಿದ್ದುಪಡಿಯೊಂದಿಗೆ ಅಗತ್ಯ ಬದಲಾವಣೆಗಳನ್ನು ಮಾಡಿ ಈ ನಿಯಮಾವಳಿಗಳನ್ನು

ಜಾರಿಗೊಳಿಸಲಾಗಿದೆ. ಇದರ ಪ್ರಕಾರ ನಗರ ಸ್ಥಳೀಯ ಸಂಸ್ಥೆಗಳನ್ನು ಈ ಕೆಳಕಂಡಂತೆ ವರ್ಗೀಕರಿಸಲಾಗಿದೆ.

1. ನಗರ ಪಾಲಿಕೆ/ ಮಹಾನಗರ ಪಾಲಿಕೆ- (ಪ್ರಮುಖ ನಗರಗಳಲ್ಲಿ)
2. ನಗರಸಭೆ ಅಥವಾ ಪುರಸಭೆಗಳು- (ನಗರ ಮತ್ತು ಪಟ್ಟಣಗಳಲ್ಲಿ)
3. ದಂಡು ಪ್ರದೇಶ- (ರಕ್ಷಣಾ ಪಡೆಯ ಹಿಡಿತದಲ್ಲಿರುವ ಪ್ರದೇಶ)
4. ಪಟ್ಟಣ ಪಂಚಾಯಿತಿ

### ನಗರ ಪಾಲಿಕೆ/ ಮಹಾನಗರ ಪಾಲಿಕೆ:

ನಗರದ ಜನಸಂಖ್ಯೆಗೆ ಅನುಗುಣವಾಗಿ ವಾರ್ಡ್‌ಗಳನ್ನು ರಚಿಸಿ 30 ರಿಂದ 100 ಸಂಖ್ಯೆಯ ಸದಸ್ಯರನ್ನು ಆಯ್ಕೆ ಮಾಡಲಾಗುತ್ತದೆ. ಸಾಮಾನ್ಯವಾಗಿ 3 ಲಕ್ಷ ಜನಸಂಖ್ಯೆ ಮೀರಿದ ನಗರವನ್ನು ಮಹಾನಗರ ಪಾಲಿಕೆ ಎಂದು ಕರೆಯಲಾಗಿದೆ. ಇದರ ಸದಸ್ಯರನ್ನು 'ಕಾರ್ಪೊರೇಟರ್' ಗಳೆಂದು ಕರೆಯಲಾಗುತ್ತದೆ. ಚುನಾಯಿತ ಸದಸ್ಯರ ಅಧಿಕಾರವಧಿ 5 ವರ್ಷಗಳು.

1. ಮಹಾನಗರ ಪಾಲಿಕೆಯಲ್ಲಿ ಪರಿಶಿಷ್ಟ ಜಾತಿ 15% ಮತ್ತು ಪರಿಶಿಷ್ಟ ವರ್ಗ 3% ಹಿಂದುಳಿದ ವರ್ಗಗಳು 1/ 3 ಮತ್ತು ಮಹಿಳೆಯರಿಗೆ 50% ಸೂಕ್ತ ಮೀಸಲಾತಿ ಕಲ್ಪಿಸಲಾಗಿದೆ.
2. ರಾಜ್ಯ ಸರ್ಕಾರವು ಸಮಾಜ ಸೇವೆ, ಶಿಕ್ಷಣ, ಆಡಳಿತ ಕ್ಷೇತ್ರಗಳಲ್ಲಿ ಪ್ರಖ್ಯಾತಿ ಹೊಂದಿದ ಐವರು ಗಣ್ಯವ್ಯಕ್ತಿಗಳನ್ನು ನಾಮಕರಣ ಮಾಡುತ್ತದೆ. ಇವರು ಸಭೆಯಲ್ಲಿ ಚುನಾಯಿತ ಸದಸ್ಯರ ಜೊತೆ ಭಾಗವಹಿಸುತ್ತಾರೆ. ಆದರೆ ಮತ ಚಲಾಯಿಸುವ ಹಕ್ಕನ್ನು ಹೊಂದಿರುವುದಿಲ್ಲ.
3. ಪಾಲಿಕೆ ವ್ಯಾಪ್ತಿಯ ವಿಧಾನಸಭೆ, ವಿಧಾನ ಪರಿಷತ್, ಲೋಕಸಭೆ ಮತ್ತು ರಾಜ್ಯಸಭೆಯ ಸದಸ್ಯರುಗಳು ಸಭೆಯಲ್ಲಿ ಭಾಗವಹಿಸುವ ಮತ್ತು ಮತ ಚಲಾಯಿಸುವ ಹಕ್ಕನ್ನು ಹೊಂದಿರುತ್ತಾರೆ.

ಪಾಲಿಕೆಯ ಚುನಾಯಿತ ಸದಸ್ಯರಲ್ಲಿ ಒಬ್ಬರನ್ನು ಮಹಾ ಪೌರರು (ಮೇಯರ್) ಮತ್ತೊಬ್ಬರನ್ನು ಉಪಮಹಾಪೌರರನ್ನು ಒಂದು ವರ್ಷದ ಅವಧಿಗೆ ಆಯ್ಕೆ ಮಾಡಲಾಗುತ್ತದೆ. ಮಹಾಪೌರರು ಸಭೆಯ ಅಧ್ಯಕ್ಷತೆ ವಹಿಸಿ ಸಭೆಯಲ್ಲಿ ಕೈಗೊಂಡ ತೀರ್ಮಾನಗಳನ್ನು ರಚನಾತ್ಮಕವಾಗಿ ಕಾರ್ಯಗತಗೊಳಿಸಲು ಕ್ರಮ ಕೈಗೊಳ್ಳುತ್ತಾರೆ. ಈ ಮೂಲಕ ನಗರದ ಸಮಗ್ರ ಅಭಿವೃದ್ಧಿಯ ದೃಷ್ಟಿಯಿಂದ ಮೇಯರ್ ಪ್ರಮುಖ ಪಾತ್ರ ವಹಿಸುತ್ತಾರೆ. ಕರ್ನಾಟಕದಲ್ಲಿ ಬೆಂಗಳೂರು, ಮೈಸೂರು, ಹುಬ್ಬಳ್ಳಿ-ಧಾರವಾಡ ಮಂಗಳೂರು, ಬೆಳಗಾವಿ, ಕಲಬುರಗಿ, ದಾವಣಗೆರೆ, ಬಳ್ಳಾರಿ, ಶಿವಮೊಗ್ಗ, ತುಮಕೂರು ವಿಜಯಪುರ ನಗರಗಳಲ್ಲಿ ಮಹಾನಗರ ಪಾಲಿಕೆಗಳು ಕಾರ್ಯನಿರ್ವಹಿಸುತ್ತಿವೆ.

ಬೆಂಗಳೂರಿನ ನಗರಪಾಲಿಕೆಯನ್ನು ಬೃಹತ್ ಬೆಂಗಳೂರು ಮಹಾನಗರ ಪಾಲಿಕೆ (BBMP) ಎಂದು ಕರೆಯಲಾಗಿದೆ. ಜನಸಂಖ್ಯೆ ಗಾತ್ರಕ್ಕನುಸಾರವಾಗಿ 198 ವಾರ್ಡ್‌ಗಳನ್ನಾಗಿ ವಿಂಗಡಿಸಿ 198 ಕಾರ್ಪೋರೇಟರ್ ಗಳು ಅಲ್ಲಿನ ಸದಸ್ಯರಾಗಿ ಕಾರ್ಯನಿರ್ವಹಿಸುತ್ತಿದ್ದಾರೆ.

ಸರ್ಕಾರವು ಪಾಲಿಕೆಯ ಆಡಳಿತ ಮುಖ್ಯಸ್ಥರನ್ನಾಗಿ ಹಿರಿಯ (ಅಖಿಲ ಭಾರತ ಆಡಳಿತ ಸೇವಾ ವರ್ಗ) ಅಧಿಕಾರಿಗಳನ್ನು 'ಆಯುಕ್ತ' ರನ್ನಾಗಿ ನೇಮಕ ಮಾಡುತ್ತದೆ. ಇವರು ತಮ್ಮ ಆಡಳಿತ ಸಿಬ್ಬಂದಿಯೊಂದಿಗೆ ಪಾಲಿಕೆಯ ನಿರ್ಣಯಗಳನ್ನು ಮತ್ತು ಕಾರ್ಯಕ್ರಮಗಳನ್ನು ಅನುಷ್ಠಾನಗೊಳಿಸುವ ಗುರುತರ ಜವಾಬ್ದಾರಿಯನ್ನು ಹೊಂದಿರುತ್ತಾರೆ.

### ನಗರ ಪಾಲಿಕೆ/ ಮಹಾನಗರ ಪಾಲಿಕೆಯ ಕಾರ್ಯಗಳು:

1. ನಗರದ ಪೌರಾಡಳಿತದ ಸಮಗ್ರ ಕಾರ್ಯನಿರ್ವಹಣೆ.
2. ಪಾಲಿಕೆಯ ಮುಂಗಡ ಪತ್ರ ರಚನೆ ಮತ್ತು ಅದಕ್ಕೆ ಅನುಮೋದನೆ ಪಡೆಯುವುದು.
3. ಸಾರ್ವಜನಿಕ ರಸ್ತೆಗಳು, ಸೇತುವೆಗಳು, ಮಾರುಕಟ್ಟೆಗಳು ಮತ್ತು ಅಸ್ಪತ್ರೆಗಳ ನಿರ್ಮಾಣ ಹಾಗೂ ನಿರ್ವಹಣೆ.
4. ಸಾರ್ವಜನಿಕ ಉದ್ಯಾನವನಗಳ ಮತ್ತು ಕ್ರೀಡಾಂಗಣಗಳ ನಿರ್ಮಾಣ ಹಾಗೂ ನಿರ್ವಹಣೆ.
5. ಸಾರ್ವಜನಿಕ ಶೌಚಾಲಯಗಳ ನಿರ್ಮಾಣ ಮತ್ತ ನಿರ್ವಹಣೆ.
6. ಸಾರ್ವಜನಿಕ ಆರೋಗ್ಯ ಸಂರಕ್ಷಣೆ ಹಾಗೂ ಜನನ ಮತ್ತು ಮರಣಗಳ ನೋಂದಣಿ ಮಾಡುವುದು.
7. ಕಟ್ಟಡಗಳ ನಿರ್ಮಾಣಕ್ಕೆ ಅನುಮತಿ ಮತ್ತು ನಿಯಂತ್ರಣ.
8. ನಗರ ನೈರ್ಮಲ್ಯೀಕರಣ ಮತ್ತು ಒಳಚರಂಡಿ ವ್ಯವಸ್ಥೆಯ ನಿರ್ವಹಣೆ.
9. ಆಹಾರ ಪದಾರ್ಥ, ಔಷಧಿ, ಹಾಲು ಮಾರಾಟದ ಕಲಬೆರಕೆ ನಿಯಂತ್ರಿಸುವುದು.
10. ಪ್ರಾಥಮಿಕ ಶಾಲೆಗಳು, ಗ್ರಂಥಾಲಯಗಳ ನಿರ್ಮಾಣ ಮತ್ತು ನಿರ್ವಹಣೆ.
11. ಸ್ಮಾರಕಗಳ ಸಂರಕ್ಷಣೆ ಮಾಡುವುದು.

ಇವೆಲ್ಲವು ನಗರ/ ಮಹಾನಗರ ಪಾಲಿಕೆಯ ಕಾರ್ಯಗಳಾಗಿವೆ.

### ನಗರಸಭೆಗಳು ಮತ್ತು ಪಟ್ಟಣ ಪುರಸಭೆಗಳು

ನಗರದ ಜನಸಂಖ್ಯೆಯನ್ನಾಧರಿಸಿ ನಗರ ಮತ್ತು ಪಟ್ಟಣ ಪುರಸಭೆಗಳನ್ನು ರಚಿಸಲಾಗುತ್ತದೆ. ನಗರದ ಜನಸಂಖ್ಯೆ 50 ಸಾವಿರಕ್ಕಿಂತ ಹೆಚ್ಚು ಮತ್ತು 3 ಲಕ್ಷಕ್ಕಿಂತ ಕಡಿಮೆ ಇದ್ದರೆ ಅದನ್ನು ನಗರಸಭೆ ಎಂದು ಪರಿಗಣಿಸಲಾಗಿದೆ. ಹಾಗೇಯೆ 20 ಸಾವಿರಕ್ಕಿಂತ ಹೆಚ್ಚು ಮತ್ತು 50 ಸಾವಿರಕ್ಕಿಂತ ಕಡಿಮೆ ಜನಸಂಖ್ಯೆ ಹೊಂದಿದ್ದರೆ ಅದನ್ನು ಪಟ್ಟಣ ಪುರಸಭೆ ಎಂದು ಪರಿಗಣಿಸಲಾಗಿದೆ.

ಸಾಮಾನ್ಯವಾಗಿ ನಗರ ಸಭೆಗಳಿಗೆ 31 ರಿಂದ 37 ಸದಸ್ಯರು
ಪುರಸಭೆಗಳಿಗೆ 23 ರಿಂದ 27 ಸದಸ್ಯರು

ವಿವಿಧ ವಾರ್ಡ್‌ಗಳಿಂದ ಆಯ್ಕೆಯಾಗುತ್ತಾರೆ. ಇವರ ಅಧಿಕಾರವಧಿ 5 ವರ್ಷಗಳು ಸರ್ಕಾರವು 5 ಮಂದಿ ನಾಮ ನಿರ್ದೇಶಿತ ಸದಸ್ಯರನ್ನು ಎನೇಮಕ ಮಾಡುತ್ತದೆ. ಇವರಿಗೆ ಸಭೆಯ ಕಲಾಪದಲ್ಲಿ ಭಾಗವಹಿಸಲು ಅವಕಾಶವಿರುತ್ತದೆ. ಮತ ಚಲಾಯಿಸಲು ಅವಕಾಶವಿರುವುದಿಲ್ಲ.

ನಗರ ವ್ಯಾಪ್ತಿಯ ವಿಧಾನಸಭೆ, ವಿಧಾನ ಪರಿಷತ್, ಲೋಕಸಭೆ ಮತ್ತು ರಾಜ್ಯಸಭೆಗಳ ಸದಸ್ಯರು ಸಭೆಗಳಲ್ಲಿ ಭಾಗವಹಿಸಿ ಮತ ಚಲಾಯಿಸುವ ಅಧಿಕಾರ ಹೊಂದಿರುತ್ತಾರೆ.

ಪರಿಶಿಷ್ಟ ಜಾತಿ 15% ಪರಿಶಿಷ್ಟ ವರ್ಗ 3% ಹಿಂದುಳಿದ ವರ್ಗ 1/ 3 ಮತ್ತು ಮಹಿಳೆಯರಿಗೆ 50% ಸೂಕ್ತ ಮೀಸಲಾತಿ ಕಲ್ಪಿಸಲಾಗಿದೆ.

ಸದಸ್ಯರು ತಮ್ಮಲ್ಲಿಯೇ ಒಬ್ಬರನ್ನು ಅಧ್ಯಕ್ಷ ಮತ್ತೊಬ್ಬರನ್ನು ಉಪಾಧ್ಯಕ್ಷರನ್ನಾಗಿ ಆಯ್ಕೆ ಮಾಡಿಕೊಳ್ಳುತ್ತಾರೆ.

ನಗರಸಭೆ ಆಯುಕ್ತರನ್ನು ಮತ್ತು ಪುರಸಭೆ ಮುಖ್ಯಾಧಿಕಾರಿಯನ್ನು ರಾಜ್ಯ ಸರ್ಕಾರ ನೇಮಕ ಮಾಡುತ್ತದೆ. ಇವರು ಆಡಳಿತದ ಮುಖ್ಯಸ್ಥರಾಗಿದ್ದು ಸಭೆಯು ತೆಗೆದುಕೊಂಡ ತೀರ್ಮಾನ ಮತ್ತು ಇತರ ಕಾರ್ಯಕ್ರಮಗಳನ್ನು ಅನುಷ್ಠಾನಗೊಳಿಸುವ ಗುರುತರ ಜವಾಬ್ದಾರಿಯನ್ನು ಹೊಂದಿರುತ್ತಾರೆ.

ಸಮರ್ಥ ಅಥವಾ ದಕ್ಷ ಆಡಳಿತ ನಿರ್ವಹಣೆಗೆ ಸ್ಥಾಯಿಸಮಿತಿಗಳ ರಚನೆಗೆ ಅವಕಾಶ ಕಲ್ಪಿಸಲಾಗಿದೆ. ಅವುಗಳಲ್ಲಿ ಮುಖ್ಯವಾದವುಗಳೆಂದರೆ.

1. ತೆರಿಗೆ, ಹಣಕಾಸು ಮತ್ತು ಅಪೀಲು ಸಮಿತಿ.
2. ಸಾರ್ವಜನಿಕ ಆರೋಗ್ಯ, ಶಿಕ್ಷಣ.
3. ಸಾಮಾಜಿಕ ನ್ಯಾಯ ಸಮಿತಿ.

### ಕಂಟೋನ್ಮೆಂಟ್ ಬೋರ್ಡ್‌ಗಳು (ದಂಡು ಪ್ರದೇಶಗಳು)

ಕಂಟೋನ್ಮೆಂಟ್ ಬೋರ್ಡ್ ಗಳು ಮಿಲಿಟರಿ ರಕ್ಷಣಾ ಪ್ರದೇಶಗಳಲ್ಲಿ (ದಂಡು ಪ್ರದೇಶ) ಕಾರ್ಯನಿರ್ವಹಿಸುತ್ತದೆ. ಇದು ಸಂಪೂರ್ಣವಾಗಿ ರಕ್ಷಣಾ ಇಲಾಖೆಯ ನೇರ ಆಡಳಿತಕ್ಕೆ ಒಳಪಟ್ಟಿರುವ ಪ್ರದೇಶವಾಗಿರುತ್ತದೆ. ಉನ್ನತಸ್ಥಾನದಲ್ಲಿರುವ ಮಿಲಿಟರಿ ಅಧಿಕಾರಿಗಳು ಈ ಬೋರ್ಡ್ಗಳಿಗೆ ನೇಮಕಗೊಂಡಿರುತ್ತಾರೆ.

### ಪಟ್ಟಣ ಪಂಚಾಯಿತಿ

74 ನೇ ಸಂವಿಧಾನ ತಿದ್ದುಪಡಿ ಕಾಯ್ದೆಯು ನಗರ ಪ್ರದೇಶದ ಲಕ್ಷಣಗಳನ್ನು ಹೊಂದಿರುವ ಗ್ರಾಮೀಣ ಪ್ರದೇಶಗಳಲ್ಲಿ ಪಟ್ಟಣ ಪಂಚಾಯಿತಿಗಳನ್ನು ರಚಿಸಲು ಅವಕಾಶ ಕಲ್ಪಿಸಿದೆ.

ಕರ್ನಾಟಕದಲ್ಲಿ 10,000 ದಿಂದ 20,000 ಜನಸಂಖ್ಯೆಯುಳ್ಳ ಪಟ್ಟಣ ಪ್ರದೇಶಗಳಲ್ಲಿ ಪಂಚಾಯಿತಿಗಳನ್ನು ಸ್ಥಾಪಿಸಲಾಗಿದೆ. ಸಾಮಾನ್ಯವಾಗಿ 5 ವರ್ಷಗಳ ಅವಧಿಗೆ ಸದಸ್ಯರುಗಳನ್ನು ಆಯ್ಕೆ ಮಾಡಲಾಗುತ್ತದೆ. ಸದಸ್ಯರು ತಮ್ಮಲ್ಲಿಯೇ ಒಬ್ಬರನ್ನು ಅಧ್ಯಕ್ಷ ಮತ್ತು ಮತ್ತೊಬ್ಬರನ್ನು ಉಪಾಧ್ಯಕ್ಷರನ್ನಾಗಿ 30 ತಿಂಗಳ ಅವಧಿಗೆ ಆಯ್ಕೆ ಮಾಡುತ್ತಾರೆ.

ಪರಿಶಿಷ್ಟ ಜಾತಿ 15% ಪರಿಶಿಷ್ಟ ವರ್ಗ 3% ಇತರೆ ಹಿಂದುಳಿದ ವರ್ಗಗಳು 1/ 3 ಮತ್ತು ಮಹಿಳೆಯರಿಗೆ 50% ಮೀಸಲಾತಿ ಕಲ್ಪಿಸಲಾಗಿದೆ.

ರಾಜ್ಯ ಸರ್ಕಾರದಿಂದ ನೇಮಕವಾದ ಮುಖ್ಯಾಧಿಕಾರಿ ಮತ್ತು ಅವರ ಸಿಬ್ಬಂದಿ, ಆಡಳಿತದ ಸಂಪೂರ್ಣ ಉಸ್ತುವಾರಿ ವಹಿಸುತ್ತಾರೆ.

ಸಾಮಾನ್ಯವಾಗಿ ನಗರ/ ಪುರಸಭೆಗಳು ನಿರ್ವಹಿಸುವ ಕಾರ್ಯಗಳನ್ನು ಪಟ್ಟಣ ಪಂಚಾಯಿತಿಗಳು ಕೂಡ ನಿರ್ವಹಿಸುತ್ತವೆ.

## ಅಭ್ಯಾಸ

### I. ಒಂದು ವಾಕ್ಯದಲ್ಲಿ ಉತ್ತರಿಸಿ.

1. ಗ್ರಾಮ ಸಭೆ ಎಂದರೇನು?
2. ಸ್ಥಳೀಯ ಸರ್ಕಾರಗಳೆಂದರೇನು?
3. ಭಾರತದ ಸ್ಥಳೀಯ ಸರ್ಕಾರ ವ್ಯವಸ್ಥೆಯ ಪಿತಾಮಹ ಯಾರು?
4. ನಗರ ಮತ್ತು ಸ್ಥಳೀಯ ಸಂಸ್ಥೆಗಳ ಸಭೆಯ ಕೋರಂ ಎಷ್ಟು?
5. ನಗರ ಪಾಲಿಕೆ ಎಂದರೇನು?
6. ಸ್ಥಾಯಿ ಸಮಿತಿಗಳೆಂದರೇನು?
7. ಜಿಲ್ಲಾ ಪಂಚಾಯಿತಿ ಅಧ್ಯಕ್ಷರ ಅಧಿಕಾರವಧಿ ಎಷ್ಟು?

### II. ಬಿಟ್ಟ ಸ್ಥಳವನ್ನು ಸೂಕ್ತ ಪದದಿಂದ ತುಂಬಿರಿ.

1. ಪಂಚಾಯತ್ ರಾಜ್ಯ ವ್ಯವಸ್ಥೆಯನ್ನು ಪ್ರಥಮವಾಗಿ ಅಳವಡಿಸಿಕೊಂಡ ರಾಜ್ಯ ________.
2. ಪಂಚಾಯಿತಿ ರಾಜ್ಯ ವ್ಯವಸ್ಥೆಯಲ್ಲಿ ಮೂಲ ಘಟಕ ________.
3. ಗ್ರಾಮ ಸಭೆಯನ್ನು ವರ್ಷದಲ್ಲಿ ಕನಿಷ್ಠ ________ ಬಾರಿ ಕರೆಯಲಾಗುತ್ತದೆ.
4. ಮಹಾನಗರ ಪಾಲಿಕೆ ಸದಸ್ಯರನ್ನು ________ ಎಂದು ಕರೆಯುತ್ತಾರೆ.
5. ಸರ್ಕಾರ ನೇಮಕ ಮಾಡುವ ಪಾಲಿಕೆಯ ಆಡಳಿತದ ಮುಖ್ಯಸ್ಥರು ________
6. ಗ್ರಾಮ ಸಭೆಯು ಗ್ರಾಮೀಣ ಸ್ವಯಂ ಆಡಳಿತ ಸಂಸ್ಥೆಯ ________ ಘಟಕವಾಗಿದೆ.

III. **‘ಅ’ ಪಟ್ಟಿಗೆ ‘ಬ’ ಪಟ್ಟಿಯ ಅಂಶಗಳನ್ನು ಹೊಂದಿಸಿ ಬರೆಯಿರಿ.**

| **ಅ ಪಟ್ಟಿ** | **ಬ ಪಟ್ಟಿ** |
|---|---|
| 1. 73 ಸಂವಿಧಾನ ತಿದ್ದುಪಡಿ | 1. ಪಕ್ಷಾಧಾರಿತ ಚುನಾವಣೆ |
| 2. 74 ಸಂವಿಧಾನ ತಿದ್ದುಪಡಿ | 2. ಪಕ್ಷ ರಹಿತ ಚುನಾವಣೆ |
| 3. ಗ್ರಾಮ ಪಂಚಾಯಿತಿ | 3. ಗ್ರಾಮೀಣ ಸ್ಥಳೀಯ ಸಂಸ್ಥೆಗಳು |
| 4. ಜಿಲ್ಲಾ ಪಂಚಾಯಿತಿ | 4. ನಗರ ಸ್ಥಳೀಯ ಸಂಸ್ಥೆಗಳು |
| 5. ಜಿಲ್ಲಾ ಪಂಚಾಯಿತಿ ಆಡಳಿತ ಮುಖ್ಯಸ್ಥ | 5. ಆಯುಕ್ತರು |
| | 6. ಮುಖ್ಯ ಕಾರ್ಯನಿರ್ವಹಣಾ ಅಧಿಕಾರಿ |

IV. **ಸರಿಯಾದ ಉತ್ತರವನ್ನು ಆರಿಸಿ ಉತ್ತರ ಸೂಚಿಯಲ್ಲಿ ಗುರುತಿಸಿ.**

1. ಪಂಚಾಯತ್ ರಾಜ್ ವ್ಯವಸ್ಥೆಯ ಬೆನ್ನೆಲುಬು.

   ಎ) ಗ್ರಾಮ ಪಂಚಾಯಿತಿ

   ಬಿ) ಜಿಲ್ಲಾ ಪಂಚಾಯಿತಿ

   ಸಿ) ಗ್ರಾಮ ಸಭೆ

   ಡಿ) ತಾಲ್ಲೂಕು ಪಂಚಾಯಿತಿ

2. ನಗರ ಸಭೆಯ ಕಾರ್ಯಕಲಾಪ ನಡೆಸಬೇಕಾದರೆ ಬೇಕಾಗುವ ಕನಿಷ್ಠ ಸದಸ್ಯರ ಸಂಖ್ಯೆ

   ಎ) ಸಭೆಯ ಒಟ್ಟು ಸದಸ್ಯರ 1/ 3 ರಷ್ಟು ಸದಸ್ಯರು.

   ಬಿ) ಸಭೆಯ ಒಟ್ಟು ಸದಸ್ಯರ 2/ 4 ರಷ್ಟು ಸದಸ್ಯರು.

   ಸಿ) ಸಭೆಯ ಒಟ್ಟು ಸದಸ್ಯರ 1/ 4 ರಷ್ಟು ಸದಸ್ಯರು.

   ಡಿ) ಸಭೆಯ ಒಟ್ಟು ಸದಸ್ಯರ ಅರ್ಧದಷ್ಟು ಸದಸ್ಯರು.

3. ಜಿಲ್ಲಾ ಪಂಚಾಯಿತಿ ಸದಸ್ಯರ ಅಧಿಕಾರವಧಿ.

   ಎ) ಮೂರು ವರ್ಷಗಳು

   ಬಿ) ನಾಲ್ಕು ವರ್ಷಗಳು

   ಸಿ) ಐದು ವರ್ಷಗಳು

   ಡಿ) ಆರು ವರ್ಷಗಳು

4. ಕರ್ನಾಟಕದ ಪಂಚಾಯತ್ ರಾಜ್ ವ್ಯವಸ್ಥೆಯ ಪಿತಾಮಹ.

ಎ) ರಾಮಕೃಷ್ಣ ಹೆಗಡೆ

ಬಿ) ಎಂ. ವೈ. ಘೋರ್ಪಡೆ

ಸಿ) ಅಬ್ದುಲ್ ನಜೀರ್ಸಾಬ್

ಡಿ) ಎಂ. ಪಿ. ಪ್ರಕಾಶ್

5. ಈ ಕೆಳಗಿನ ಯಾವ ನಗರದಲ್ಲಿ ಮಹಾನಗರಪಾಲಿಕೆ ಇರುವುದಿಲ್ಲ?

ಎ) ಕೋಲಾರ

ಬಿ) ಮೈಸೂರು

ಸಿ) ಮಂಗಳೂರು

ಡಿ) ದಾವಣಗೆರೆ

**V. ಎರಡು ಅಥವಾ ಮೂರು ವಾಕ್ಯಗಳಲ್ಲಿ ಉತ್ತರಿಸಿ.**

1. ಗ್ರಾಮ ಪಂಚಾಯಿತಿಯ ಸ್ಥಾಯಿ ಸಮಿತಿಗಳನ್ನು ಹೆಸರಿಸಿ.
2. ಗ್ರಾಮ ಸಭೆಯ ಬಗ್ಗೆ ಟಿಪ್ಪಣಿ ಬರೆಯಿರಿ.
3. ಪಟ್ಟಣ ಪಂಚಾಯಿತಿಯ ರಚನೆಯನ್ನು ಬರೆಯಿರಿ.
4. ಕಂಟೋನ್ಮೆಂಟ್ ಬೋರ್ಡ್ ಗಳೆಂದರೇನು?

**VI. ಐದು ಅಥವಾ ಆರು ವಾಕ್ಯಗಳಲ್ಲಿ ಉತ್ತರಿಸಿ**

1. ತಾಲ್ಲೂಕು ಪಂಚಾಯಿತಿಯ ರಚನೆ ಕುರಿತು ಬರೆಯಿರಿ.
2. ನಗರ ಸಭೆಯ ರಚನೆಯನ್ನು ವಿವರಿಸಿ.

**VII. ಎಂಟು ಅಥವಾ ಹತ್ತು ವಾಕ್ಯಗಳಲ್ಲಿ ಉತ್ತರಿಸಿ.**

1. ಜಿಲ್ಲಾ ಪಂಚಾಯಿತಿಯ ಸ್ಥಾಯಿಸಮಿತಿಗಳನ್ನು ಬರೆಯಿರಿ.
2. ಜಿಲ್ಲಾ ಪಂಚಾಯಿತಿ ಕಾರ್ಯಗಳನ್ನು ವಿವರಿಸಿ.
3. ಗ್ರಾಮ ಪಂಚಾಯಿತಿ ಕಾರ್ಯಗಳನ್ನು ವಿವರಿಸಿ.
4. ಮಹಾನಗರ ಪಾಲಿಕೆಯ ಕಾರ್ಯಗಳನ್ನು ತಿಳಿಸಿ.

**ಸಲಹಾತ್ಮಕ ಚಟುವಟಿಕೆಗಳು:**

1. ನಿಮ್ಮ ಪ್ರದೇಶದಲ್ಲಿರುವ ಗ್ರಾಮ ಪಂಚಾಯಿತಿ ಕಾರ್ಯಾಲಯಕ್ಕೆ ಭೇಟಿ ನೀಡಿ.
2. ಸ್ಥಳೀಯ ಜನಪ್ರತಿನಿಧಿಗಳನ್ನು ಭೇಟಿ ಮಾಡಿ ಸ್ಥಳೀಯ ಸಮಸ್ಯೆಗಳನ್ನು ನಿವಾರಿಸಲು ಪ್ರಯತ್ನಿಸಿ.
3. ಗ್ರಾಮಾಂತರ ಮತ್ತು ನಗರ ಸ್ಥಳೀಯ ಸರ್ಕಾರಗಳ ವರ್ಗೀಕರಣವನ್ನು ಮತ್ತು ಅವುಗಳ ಕಾರ್ಯನಿರ್ವಹಣೆಯನ್ನು ಹೋಲಿಸಿ ನೋಡಿ.
4. ಜಿಲ್ಲಾ ಪಂಚಾಯಿತಿ ಕಾರ್ಯಾಲಯದ ಬಗ್ಗೆ ತಿಳಿಯಿರಿ.
5. ಮಹಾ ನಗರ ಪಾಲಿಕೆಯ ಸ್ಥಾಯಿ ಸಮಿತಿಗಳನ್ನು ಪಟ್ಟಿಮಾಡಿ.

## ಅಧ್ಯಾಯ- 12 ಸಾರ್ವಜನಿಕ ಲೋಕಸೇವಾ ಆಯೋಗಗಳು (PUBLIC SERVICE COMMISSION)

### ಕಲಿಕಾ ಉದ್ದೇಶಗಳು:

1. ಲೋಕಸೇವಾ ಆಯೋಗಗಳ ರಚನೆ, ಕಾರ್ಯಾಧಿಕಾರಗಳು ಮತ್ತು ಪ್ರಕಾರಗಳನ್ನು ಅರಿತುಕೊಳ್ಳುವುದು.
2. ಲೋಕಸೇವಾ ಆಯೋಗಗಳ ಅಗತ್ಯತೆಯ ಬಗೆಗೆ ತಿಳಿಯುವುದು.
3. ಕರ್ನಾಟಕ ಲೋಕಸೇವಾ ಆಯೋಗದ ಬಗ್ಗೆ ವಿಶೇಷ ತಿಳುವಳಿಕೆ ಹೊಂದುವುದು.
4. ವಿಭಿನ್ನ ಸಾಮರ್ಥ್ಯವುಳ್ಳವರು/ ದೃಷ್ಟಿ ವಿಕಲಚೇತನರಿಗೂ ಸಹ ಸ್ಪರ್ಧಾತ್ಮಕ ಪರೀಕ್ಷೆಗಳಲ್ಲಿ ಭಾಗವಹಿಸಿ ಉನ್ನತ ಹುದ್ದೆಗಳನ್ನು ಪಡೆಯುವಂತೆ ಪ್ರೇರೇಪಿಸುವುದು.

ಸಂವಿಧಾನದ 315 ರಿಂದ 323 ರ ವರೆಗಿನ ವಿಧಿಗಳು. ಲೋಕಸೇವಾ ಆಯೋಗವನ್ನು ಕುರಿತು ವಿವರಣೆ ನೀಡುತ್ತವೆ.

ಕೇಂದ್ರ ಲೋಕಸೇವಾ ಆಯೋಗವು ಅಖಿಲಭಾರತೀಯ ಸೇವೆ ಹಾಗೂ ಕೇಂದ್ರ ಸೇವೆಗಳಿಗೆ ಸ್ಪರ್ಧಾತ್ಮಕ ಪರೀಕ್ಷೆಗಳ ಮೂಲಕ ಅರ್ಹ ಅಭ್ಯರ್ಥಿಗಳನ್ನು ಆಯ್ಕೆ ಮಾಡುತ್ತದೆ. ರಾಜ್ಯ ಲೋಕಸೇವಾ ಆಯೋಗವು ಸ್ಪರ್ಧಾತ್ಮಕ ಪರೀಕ್ಷೆಗಳ ಮೂಲಕ ರಾಜ್ಯ ಸೇವೆಗಳಿಗೆ ಅರ್ಹ ಅಭ್ಯರ್ಥಿಗಳನ್ನು ಆಯ್ಕೆ ಮಾಡುತ್ತದೆ.

### ಲೋಕಸೇವಾ ಆಯೋಗದಲ್ಲಿ ಮೂರು ವಿಧಗಳಿವೆ. ಅವುಗಳೆಂದರೆ:

1. ಕೇಂದ್ರ ಲೋಕಸೇವಾ ಆಯೋಗ- (Union Public Service Commission)
2. ರಾಜ್ಯ ಲೋಕಸೇವಾ ಆಯೋಗ- (State Public Service Commission)
3. ಜಂಟಿ ಲೋಕಸೇವಾ ಆಯೋಗ- (Joint Public Ser vice Commission)

#### *1) ಕೇಂದ್ರ ಲೋಕಸೇವಾ ಆಯೋಗ (Union Public Service Commission):*

ನಮ್ಮ ಸಂವಿಧಾನದ 315 ನೇ ವಿಧಿಯು ಕೇಂದ್ರ ಲೋಕಸೇವಾ ಆಯೋಗವನ್ನು ಸ್ಥಾಪಿಸಲು ಅವಕಾಶ ಮಾಡಿಕೊಟ್ಟಿದೆ.

**ರಚನೆ:**

**1. ಗಾತ್ರ:** ಕೇಂದ್ರ ಲೋಕಸೇವಾ ಆಯೋಗವು ಒಬ್ಬ ಅಧ್ಯಕ್ಷ ಮತ್ತು ರಾಷ್ಟ್ರಾಧ್ಯಕ್ಷರು ಕಾಲಕಾಲಕ್ಕೆ ನಿಗಧಿಪಡಿಸುವ ಸಂಖ್ಯೆಯ ಸದಸ್ಯರನ್ನು ಒಳಗೊಂಡಿರುತ್ತದೆ. ಪ್ರಸ್ತುತ 10 ಮಂದಿ ಸದಸ್ಯರನ್ನು ಒಳಗೊಂಡಿದೆ.

**2. ನೇಮಕ:** ಕೇಂದ್ರ ಲೋಕಸೇವಾ ಆಯೋಗದ ಅಧ್ಯಕ್ಷರು ಮತ್ತು ಸದಸ್ಯರುಗಳನ್ನು ಕೇಂದ್ರ ಮಂತ್ರಿಮಂಡಲದ ಸಲಹೆ ಮೇರೆಗೆ ರಾಷ್ಟ್ರಾಧ್ಯಕ್ಷರು ನೇಮಕ ಮಾಡುತ್ತಾರೆ.

**3. ಅರ್ಹತೆಗಳು:** ಉಳಿದ 1/ 2 ರಷ್ಟು ಸದಸ್ಯರು ಸಮಾಜದಲ್ಲಿ ಪ್ರತಿಷ್ಠಿತ ವ್ಯಕ್ತಿಗಳೆಂದು ಗುರುತಿಸಲ್ಪಟ್ಟಿರಬೇಕು. ಕೇಂದ್ರ ಲೋಕಸೇವಾ ಆಯೋಗದ 1/ 2 ರಷ್ಟು ಸದಸ್ಯರು ಕೇಂದ್ರ ಅಥವಾ ರಾಜ್ಯ ಸರ್ಕಾರಿ ಸೇವೆಯಲ್ಲಿ ಕನಿಷ್ಠ 10 ವರ್ಷಗಳ ಕಾಲ ಸೇವೆ ಸಲ್ಲಿಸಿದ ಅನುಭವ ಹೊಂದಿರಬೇಕು.

**4. ಅಧಿಕಾರಾವಧಿ:** ಕೇಂದ್ರ ಲೋಕಸೇವಾ ಆಯೋಗದ ಸದಸ್ಯರ ಅಧಿಕಾರವಧಿ 6 ವರ್ಷಗಳು ಅಥವಾ 65 ವರ್ಷಗಳ ವಯೋಮಿತಿ ಇವೆರಡರಲ್ಲಿ ಯಾವುದು ಮೊದಲು ಬರುವುದು ಅದನ್ನು ಪರಿಗಣಿಸಲಾಗುವುದು.

**ಉದಾಹರಣೆಗೆ:** ‘X’ ಎನ್ನುವವರು 50 ನೇ ವಯಸಿಗೆ ಸದಸ್ಯರಾದರೆ 56 ನೇ ವರ್ಷಕ್ಕೆ ಅವರ ಸದಸ್ಯತ್ವದ ಅವಧಿ ಮುಗಿಯುತ್ತದೆ. ‘Y’ ಎನ್ನುವವರು 62 ನೇ ವಯಸ್ಸಿಗೆ ಸದಸ್ಯರಾದರೆ ಅವರು 65 ನೇ ವಯಸ್ಸಿಗೆ ನಿವೃತ್ತರಾಗುತ್ತಾರೆ.

**5. ವೇತನ ಮತ್ತು ಭತ್ಯೆಗಳು:** ಕೇಂದ್ರ ಲೋಕಸೇವಾ ಆಯೋಗದ ಅಧ್ಯಕ್ಷರು ಮತ್ತು ಸದಸ್ಯರ ವೇತನ ಮತ್ತು ಸೌಲಭ್ಯಗಳನ್ನು ಸಂಸತ್ತು ಕಾಲಕಾಲಕ್ಕೆ ನಿಗಧಿಪಡಿಸುತ್ತದೆ. ಇವರ ವೇತನ ಮತ್ತು ಸೌಲಭ್ಯಗಳು ಹಾಗೂ ನಿವೃತ್ತಿ ವೇತನವನ್ನು ಭಾರತದ ‘ಸಂಚಿತ ನಿಧಿ’ ಯಿಂದ ನೀಡಲಾಗುತ್ತದೆ.

**6. ಪದಚ್ಯುತಿ (ವಜಾಗೊಳಿಸುವುದು):** ಕೇಂದ್ರ ಲೋಕಸೇವಾ ಆಯೋಗದ ಆಧ್ಯಕ್ಷರು ಮತ್ತು ಸದಸ್ಯರನ್ನು ರಾಷ್ಟ್ರಾಧ್ಯಕ್ಷರು ಈ ಕೆಳಕಂಡ ಸಂದರ್ಭಗಳಲ್ಲಿ ವಜಾಗೊಳಿಸಬಹುದು.

1. ಸದಸ್ಯರ ದುರ್ನಡತೆ ಬಗ್ಗೆ ವಿಚಾರಣೆ ನಡೆದು ಅಪಾಧನೆ ಸಾಬೀತಾಗಿರುವ ಬಗ್ಗೆ ಸರ್ವೋಚ್ಛ ನ್ಯಾಯಾಲಯವು ರಾಷ್ಟ್ರಾಧ್ಯಕ್ಷರಿಗೆ ವರದಿ ಸಲ್ಲಿಸಿದರೆ.
2. ಅವರು ಆರ್ಥಿಕವಾಗಿ ದಿವಾಳಿಯಾಗಿದ್ದಾರೆಂದು ನ್ಯಾಯಾಲಯದಿಂದ ತೀರ್ಮಾನಿಸಲ್ಪಟ್ಟಿದ್ದರೆ.
3. ಅವರು ತಮ್ಮ ಅಧಿಕಾರದ ಅವಧಿಯಲ್ಲಿ ಬೇರೆ ಯಾವುದೇ ಲಾಭದಾಯಕ ಹುದ್ದೆಯಲ್ಲಿದ್ದಾರೆ ಎಂದು ತಿಳಿದು ಬಂದರೆ.

4. ಅವರು ದೈಹಿಕವಾಗಿ ಬಲಹೀನರಾಗಿದ್ದು ಸೇವೆಯಲ್ಲಿ ಮುಂದುವರೆಯಲು ಅಸಮರ್ಥರು ಎಂದು ತೀರ್ಮಾನಿಸಲ್ಪಟ್ಟರೆ ರಾಷ್ಟ್ರಾಧ್ಯಕ್ಷರು ಇವರನ್ನು ಅಧಿಕಾರದಿಂದ ಪದಚ್ಯುತಿಗೊಳಿಸಬಹುದು.

### ಕೇಂದ್ರ ಲೋಕಸೇವಾ ಆಯೋಗದ ಕಾರ್ಯಗಳು:

ಭಾರತ ಸಂವಿಧಾನದ 320 ಮತ್ತು 321 ನೇ ವಿಧಿಗಳು ಕೇಂದ್ರ ಲೋಕಸೇವಾ ಆಯೋಗದ ಕಾರ್ಯಗಳನ್ನು ವಿವರವಾಗಿ ತಿಳಿಸುತ್ತವೆ, ಅವುಗಳೆಂದರೆ;

1. ಆಯೋಗವು ಕೇಂದ್ರ ಮತ್ತು ಅಖಿಲ ಭಾರತ ಸೇವೆಗಳಿಗೆ ನೇಮಕ ಮಾಡಲು ಸ್ಪರ್ಧಾತ್ಮಕ ಪರೀಕ್ಷೆಗಳನ್ನು ಏರ್ಪಡಿಸುವುದು.
2. ಆಯೋಗವು ನೇಮಕಾತಿ ವಿಧಾನಗಳಿಗೆ ಸಂಬಂಧಿಸಿದಂತೆ ಕೇಂದ್ರ ಸರ್ಕಾರಕ್ಕೆ ಸಲಹೆ ನೀಡುವುದು.
3. ಆಯೋಗವು ಬಡ್ತಿ ನೀಡಲು ಅನುಸರಿಸಬೇಕಾದ ತತ್ವಗಳ ಬಗೆಗೆ ಕೇಂದ್ರ ಸರ್ಕಾರಕ್ಕೆ ಸಲಹೆ ನೀಡುವುದು.
4. ಆಯೋಗವು ಒಂದು ಸೇವೆಯಿಂದ ಇನ್ನೊಂದು ಸೇವೆಗೆ ವರ್ಗಾವಣೆ ಮಾಡುವುದಕ್ಕೆ ಸಂಬಂದಿಸಿದಂತೆ ಕೇಂದ್ರ ಸರ್ಕಾರಕ್ಕೆ ಸಲಹೆ ನೀಡುತ್ತದೆ.
5. ಆಯೋಗವು ತನ್ನ ಕರ್ತವ್ಯ ನಿರ್ವಹಣೆಗೆ ಸಂಬಂಧಿಸಿದಂತೆ ವಾರ್ಷಿಕ ವರದಿಯನ್ನು ರಾಷ್ಟ್ರಪತಿಯವರಿಗೆ ಸಲ್ಲಿಸುತ್ತದೆ.
6. ರಾಜ್ಯಪಾಲರ ವಿನಂತಿಯ ಮೇರೆಗೆ ರಾಷ್ಟ್ರಾಧ್ಯಕ್ಷರ ಅನುಮೋದನೆಯೊಂದಿಗೆ ರಾಜ್ಯ ಸೇವೆಗಳಿಗೆ ಸಂಬಂಧಿಸಿದ ಕೆಲವು ಅಥವಾ ಎಲ್ಲಾ ಕಾರ್ಯಗಳನ್ನು ಕೇಂದ್ರ ಲೋಕಸೇವಾ ಆಯೋಗವು ನಿರ್ವಹಿಸುತ್ತದೆ.

### *2) ರಾಜ್ಯ ಲೋಕಸೇವಾ ಆಯೋಗ (State Public Service Commission):*

ಭಾರತ ಸಂವಿಧಾನದ 315 ನೇ ವಿಧಿಯು ಪ್ರತಿಯೊಂದು ರಾಜ್ಯವು ಆಯಾ ರಾಜ್ಯದ ಹೆಸರಿನೊಂದಿಗೆ ರಾಜ್ಯ ಲೋಕಸೇವಾ ಆಯೋಗವನ್ನು ಹೊಂದಲು ಅವಕಾಶ ನೀಡಿದೆ. ಅದರಂತೆಯೇ 'ಕರ್ನಾಟಕ ರಾಜ್ಯ ಲೋಕಸೇವಾ ಆಯೋಗ' (Karnataka Public Service Commission) ವು ಒಂದು. ಇದರ ಕೇಂದ್ರ ಕಛೇರಿ ರಾಜ್ಯದ ರಾಜಧಾನಿ ಬೆಂಗಳೂರಿನಲ್ಲಿದೆ.

ಕರ್ನಾಟಕ ಲೋಕಸೇವಾ ಆಯೋಗದ ರಚನೆಯನ್ನು ಈ ಕೆಳಕಂಡಂತೆ ತಿಳಿಯಬಹುದು.

**1) ಗಾತ್ರ:** ಕರ್ನಾಟಕ ಲೋಕಸೇವಾ ಆಯೋಗವು ಒಬ್ಬ ಅಧ್ಯಕ್ಷ ಮತ್ತು ಇತರ ಸದಸ್ಯರನ್ನು ಒಳಗೊಂಡಿರುತ್ತದೆ. ಸಂವಿಧಾನದಲ್ಲಿ ಆಯೋಗದ ಸದಸ್ಯರ ಸಂಖ್ಯೆಯನ್ನು ನಿಗಧಿಪಡಿಸಿಲ್ಲ, ಪ್ರಸ್ತುತ ಇದು 11 ಸದಸ್ಯರನ್ನೊಳಗೊಂಡಿದೆ (2015).

**2) ನೇಮಕ:** ಕರ್ನಾಟಕ ಲೋಕಸೇವಾ ಆಯೋಗದ ಅಧ್ಯಕ್ಷರು ಮತ್ತು ಸದಸ್ಯರುಗಳನ್ನು ರಾಜ್ಯ ಮಂತ್ರಿಮಂಡಲದ ಸಲಹೆ ಮೇರೆಗೆ ರಾಜ್ಯಪಾಲರು ನೇಮಕ ಮಾಡುತ್ತಾರೆ.

**3) ಅಧಿಕಾರಾವಧಿ:** ಆಯೋಗದ ಸದಸ್ಯರು 6 ವರ್ಷಗಳ ಕಾಲ ಅಥವಾ 62 ವರ್ಷಗಳ ವಯೋಮಿತಿ ಹೊಂದುವವರೆಗೆ ಅಧಿಕಾರದಲ್ಲಿರುತ್ತಾರೆ.

**4) ಅರ್ಹತೆಗಳು:**

1. ಆಯೋಗದ ಸದಸ್ಯರ ನೇಮಕ ಹೊಂದುವವರಲ್ಲಿ 1/ 2 ರಷ್ಟು ಸದಸ್ಯರು ರಾಜ್ಯ ಸರ್ಕಾರದಲ್ಲಿ ಕನಿಷ್ಠ 10 ವರ್ಷಗಳ ಕಾಲ ಸೇವೆ ಸಲ್ಲಿಸಿರಬೇಕು.
2. ಉಳಿದ 1/ 2 ರಷ್ಟು ಸದಸ್ಯರು ಸಮಾಜಸೇವೆ, ಕಾನೂನು, ಶಿಕ್ಷಣ ಇತ್ಯಾದಿ ಕ್ಷೇತ್ರಗಳಲ್ಲಿ ಪ್ರತಿಷ್ಠಿತ ವ್ಯಕ್ತಿಗಳೆಂದು ಗುರುತಿಸಲ್ಪಟ್ಟಿರಬೇಕು.

**5) ವೇತನ ಮತ್ತು ಭತ್ಯೆಗಳು:** ಆಯೋಗದ ಅಧ್ಯಕ್ಷರು ಮತ್ತು ಸದಸ್ಯರು ಕರ್ನಾಟಕ ವಿಧಾನಮಂಡಲವು ಕಾಲ ಕಾಲಕ್ಕೆ ನಿಗಧಿಪಡಿಸುವ ವೇತನ ಮತ್ತು ಭತ್ಯೆಗಳನ್ನು ಪಡೆಯುತ್ತಾರೆ. ಇವರ ವೇತನ ಮತ್ತು ಭತ್ಯೆಗಳು ಹಾಗೂ ನಿವೃತ್ತಿ ವೇತನವನ್ನು ಕರ್ನಾಟಕ ರಾಜ್ಯದ 'ಸಂಚಿತ ನಿಧಿ' ಯಿಂದ ನೀಡಲಾಗುತ್ತದೆ.

**6) ಪದಚ್ಯುತಿ (ವಜಾಗೊಳಿಸುವಿಕೆ):** ಕರ್ನಾಟಕ ಲೋಕಸೇವಾ ಆಯೋಗದ ಅಧ್ಯಕ್ಷರು ಮತ್ತು ಸದಸ್ಯರ ದುರ್ನಡತೆಯ ಬಗ್ಗೆ ಸುಪ್ರಿಂಕೋರ್ಟ್ ವಿಚಾರಣೆ ನಡೆಸಿ, ಆಪಾದನೆಗೆ ಒಳಗಾಗಿರುವವರನ್ನು ಪದಚ್ಯುತಿಗೊಳಿಸಬೇಕೆಂದು ವರದಿ ಸಲ್ಲಿಸಿದರೆ ರಾಷ್ಟ್ರಾಧ್ಯಕ್ಷರು ಕ್ರಮ ಕೈಗೊಳ್ಳುತ್ತಾರೆ.

### ಕರ್ನಾಟಕ ಲೋಕಸೇವಾ ಆಯೋಗದ ಕಾರ್ಯಗಳು:

ಕರ್ನಾಟಕ ಲೋಕಸೇವಾ ಆಯೋಗವು ಈ ಕೆಳಕಂಡ ಕಾರ್ಯಗಳನ್ನು ನಿರ್ವಹಿಸುತ್ತದೆ, ಅವುಗಳೆಂದರೆ;

1. ರಾಜ್ಯ ಸೇವೆಗಳಿಗೆ ಸೂಕ್ತ ಅಭ್ಯರ್ಥಿಗಳನ್ನು ನೇಮಕ ಮಾಡಲು ಸ್ಪರ್ಧಾತ್ಮಕ ಪರೀಕ್ಷೆಗಳನ್ನು ಏರ್ಪಡಿಸುವುದು.
2. ನೇಮಕಾತಿ ವಿಧಾನಕ್ಕೆ ಸಂಬಂಧಿಸಿದಂತೆ ರಾಜ್ಯ ಸರ್ಕಾರಕ್ಕೆ ಸಲಹೆ ನೀಡುವುದು.
3. ಬಡ್ತಿ ನೀಡಲು ಅನುಸರಿಸಬೇಕಾದ ತತ್ವಗಳ ಬಗೆಗೆ ಮತ್ತು ವರ್ಗಾವಣೆ ಸೂತ್ರಕ್ಕೆ ಸಂಬಂಧಿಸಿದಂತೆ ರಾಜ್ಯ ಸರ್ಕಾರಕ್ಕೆ ಸಲಹೆ ನೀಡುತ್ತದೆ.

4. ಸೇವಾವಧಿ ವಿಸ್ತರಣೆ ಹಾಗೂ ನಿವೃತ್ತ ಅಧಿಕಾರಿಗಳ ಮರುನೇಮಕಾತಿಗೆ ಸಂಬಂಧಿಸಿದ ಸಲಹೆಗಳನ್ನು ರಾಜ್ಯ ಸರ್ಕಾರಕ್ಕೆ ನೀಡುತ್ತದೆ.
5. ತನ್ನ ಕಾರ್ಯನಿರ್ವಹಣೆಯ ಬಗೆಗೆ ರಾಜ್ಯಪಾಲರಿಗೆ ವಾರ್ಷಿಕ ವರದಿಯನ್ನು ಸಲ್ಲಿಸುತ್ತದೆ.
6. ಆಯೋಗವು ರಾಜ್ಯಪಾಲರು ಇಚ್ಚಿಸಿದಲ್ಲಿ ನಾಗರೀಕ ಸೇವಾ ವರ್ಗಕ್ಕೆ ಸಂಬಂಧಿಸಿದ ಯಾವುದೇ ಸಲಹೆಗಳನ್ನು ನೀಡಬಹುದು.

*3) ಜಂಟಿ ಲೋಕಸೇವಾ ಆಯೋಗ (Joint Public Service Commission):*

ಎರಡು ಅಥವಾ ಹೆಚ್ಚಿನ ರಾಜ್ಯಗಳು ಒಟ್ಟು ಸೇರಿ ಜಂಟಿ ಲೋಕಸೇವಾ ಆಯೋಗವನ್ನು ಅಂಗೀಕರಿಸಬಹುದು. ಉದಾಹರಣೆಗಾಗಿ ಈಶಾನ್ಯ ರಾಜ್ಯಗಳಾದ ಅಸ್ಸಾಂ, ಸಿಕ್ಕಿಂ, ಮೇಘಾಲಯ, ತ್ರಿಪುರ, ಅರುಣಾಚಲ ಪ್ರದೇಶ, ನಾಗಾಲಾಂಡ್, ಮೀಜೋರಾಂಗಳಿಗೆ ಜಂಟಿ ಲೋಕಸೇವಾ ಆಯೋಗ ರಚನೆಯಾಗಿದೆ. ಇದು ಅಸ್ಸಾಂ ರಾಜ್ಯದ ರಾಜಧಾನಿ ಗೌಹತಿ- ದಿಸಪುರ್ ಲ್ಲಿದೆ.

ಅಂಗವಿಕಲರು ಮತ್ತು ದೃಷ್ಟಿ ವಿಶಾಸ್ವಿಗರಿಗೂ (Visually challenged) A ಮತ್ತು B ಶ್ರೇಣಿಯ ಹುದ್ದೆಗಳಲ್ಲಿ ಶೇ. 3% ರಷ್ಟು ಮೀಸಲಾತಿಯನ್ನು ಕಡ್ಡಾಯವಾಗಿ ನೀಡಬೇಕೆಂದು 2014 ರ ಸೆಪ್ಟಂಬರ್ 12 ರಂದು ಸರ್ವೋಚ್ಚ ನ್ಯಾಯಾಲಯ ಕೇಂದ್ರ ಸರ್ಕಾರಕ್ಕೆ ತೀರ್ಪು ನೀಡುವ ಮೂಲಕ ಒತ್ತಾಯಪಡಿಸಿದೆ. ಇದು ಬಡ್ತಿಗೂ ಅನ್ವಯಿಸುತ್ತದೆ. ಈ ಹಿನ್ನೆಲೆಯಲ್ಲಿ ಈ ಪಾಠದಲ್ಲಿರುವ ಅಧ್ಯಾಯದ ಮಾಹಿತಿಯು ಗಮನಾರ್ಹವಾದುದಾಗಿದೆ.

ಹರಿಯಾಣದ ಶ್ರೀ ಅಜಿತ್‌ಕುಮಾರ್ ಯಾದವ್, ಮಧ್ಯಪ್ರದೇಶದ ಶ್ರೀ ಕೃಷ್ಣಗೋಪಾಲ ತಿವಾರಿ, ತಮಿಳುನಾಡಿನ ಎನ್. ಎಲ್. ಬೆನೋಜಿಫಿನ್ ಮತ್ತು ತಿರುವನಂತಪುರಂನ ಸುಜಿತಾರವರೆಲ್ಲ ಸ್ವತಃ ದೃಷ್ಟಿ ವಿಶಾಸ್ವಿಗರಾಗಿದ್ದರು ಕೇಂದ್ರ ಲೋಕಸೇವಾ ಆಯೋಗದಿಂದ ಏರ್ಪಟ್ಟ ಸ್ಪರ್ಧಾತ್ಮಕ ಪರೀಕ್ಷೆಗಳಲ್ಲಿ ಉತ್ತೀರ್ಣರಾಗಿ ಅಖೀಲ ಭಾರತ ಸೇವೆಯಲ್ಲಿ ಅಧಿಕಾರಿಗಳಾಗಿ ಸೇವೆ ಸಲ್ಲಿಸುತ್ತಿದ್ದಾರೆ. ಇವರ ಸಾಧನೆ ಸ್ಪರ್ಧಾತ್ಮಕ ಪರೀಕ್ಷೆಗಳ ಮೂಲಕ ಕೇಂದ್ರದ, ರಾಜ್ಯದ ಹಾಗೂ ಅಖಿಲ ಭಾರತ ಸೇವೆಗಳಂತಹ ಉನ್ನತ ಶ್ರೇಣಿಯ ಹುದ್ದೆಗಳನ್ನು ಪಡೆಯಲು ಇಚ್ಛಿಸುವ ದೃಷ್ಟಿ ವಿಶಾಸ್ವಿಗರಿಗೆಲ್ಲರಿಗೂ ಪ್ರೇರಣೆಯವಾದುದಾಗಿದೆ.

## ಅಭ್ಯಾಸ

I. **ಒಂದು ವಾಕ್ಯದಲ್ಲಿ ಉತ್ತರಿಸಿ**

1. ಕೇಂದ್ರ ಲೋಕಸೇವಾ ಆಯೋಗದ ಅಧ್ಯಕ್ಷರನ್ನು ಯಾರು ನೇಮಕ ಮಾಡುತ್ತಾರೆ?
2. ಕರ್ನಾಟಕ ಲೋಕಸೇವಾ ಆಯೋಗದ ಅಧ್ಯಕ್ಷರನ್ನು ಯಾರು ನೇಮಕ ಮಾಡುತ್ತಾರೆ?

II. **ಬಿಟ್ಟ ಸ್ಥಳದಲ್ಲಿ ಸೂಕ್ತ ಪದವನ್ನು ತುಂಬಿರಿ.**

1. ಕೇಂದ್ರ ಲೋಕಸೇವಾ ಆಯೋಗದ ಸದಸ್ಯರ ವೇತನ ಮತ್ತು ನಿವೃತ್ತಿ ವೇತನವನ್ನು _______ ನಿಧಿಯಿಂದ ಭರಿಸಲಾಗುತ್ತದೆ.
2. ಕರ್ನಾಟಕ ಲೋಕಸೇವಾ ಆಯೋಗದ ಸದಸ್ಯರ ವೇತನ ಮತ್ತು ನಿವೃತ್ತಿ ವೇತನವನ್ನು _______ ನಿಧಿಯಿಂದ ಭರಿಸಲಾಗುತ್ತದೆ.

III. **ಸರಿಯಾದ ಉತ್ತರವನ್ನು ಆರಿಸಿ ಉತ್ತರ ಸೂಚಿಯಲ್ಲಿ ಗುರುತಿಸಿ.**

1. ಕೇಂದ್ರ ಲೋಕಸೇವಾ ಆಯೋಗದ ಸದಸ್ಯರ ಅಧಿಕಾರವಧಿ.
   ಎ) 3 ವರ್ಷಗಳು
   ಬಿ) 4 ವರ್ಷಗಳು
   ಸಿ) 5 ವರ್ಷಗಳು
   ಡಿ) 6 ವರ್ಷಗಳು
2. ಕರ್ನಾಟಕ ಲೋಕಸೇವಾ ಆಯೋಗದ ಕೇಂದ್ರ ಕಛೇರಿ ಇರುವ ಸ್ಥಳ.
   ಎ) ಬೆಳಗಾವಿ
   ಬಿ) ಬೆಂಗಳೂರು
   ಸಿ) ಮೈಸೂರು
   ಡಿ) ಕಲಬುರಗಿ

IV. **ಎರಡು ಅಥವಾ ಮೂರು ವಾಕ್ಯಗಳಲ್ಲಿ ಉತ್ತರಿಸಿ.**

1. ಕೇಂದ್ರ ಲೋಕಸೇವಾ ಆಯೋಗದ ಸದಸ್ಯರಾಗಲು ಇರಬೇಕಾದ ಅರ್ಹತೆಗಳೇನು?
2. ರಾಜ್ಯ ಲೋಕಸೇವಾ ಆಯೋಗದ ಸದಸ್ಯರಾಗಲು ಇರಬೇಕಾದ ಅರ್ಹತೆಗಳೇನು?

V. **ಎಂಟು ಅಥವಾ ಹತ್ತು ವಾಕ್ಯಗಳಲ್ಲಿ ಉತ್ತರಿಸಿ.**

1. ಕೇಂದ್ರ ಲೋಕಸೇವಾ ಆಯೋಗದ ಕಾರ್ಯಗಳನ್ನು ವಿವರಿಸಿ.

2. ರಾಜ್ಯ ಲೋಕಸೇವಾ ಆಯೋಗದ ಕಾರ್ಯಗಳನ್ನು ವಿವರಿಸಿ.

**ಸಲಹಾತ್ಮಕ ಚಟುವಟಿಕೆಗಳು:**

1. ಕೆ. ಪಿ. ಎಸ್. ಸಿ (KPSC) ಕಛೇರಿಗೆ ಭೇಟಿ ಕೊಡುವುದು.
2. ಸಚಿವಾಲಯದ ಆಧಿಕಾರ ವರ್ಗವನ್ನು ಕ್ರಮಾನುಗುಣವಾಗಿ ಬರೆಯಿರಿ.

**ಬೋಧನ ಅವಧಿ-125**

**ವಿಷಯ: ರಾಜ್ಯಶಾಸ್ತ್ರ- ನಮ್ಮ ಭಾರತದ ಸಂವಿಧಾನ 10 ನೇ ತರಗತಿ**

ಒಟ್ಟು ಅಂಕಗಳು -100

ಅವಧಿ: 3 ಗಂಟೆಗಳು

ಪಾಠದ ಸಂಖ್ಯೆ.ಪಾಠದ ಹೆಸರು ಅವಧಿ ಅಂಕ ವಿಂಗಡನೆ

ಜ್ಞಾನ 40%, ತಿಳುವಳಿಕೆ 30%, ವಿಮರ್ಶಾತ್ಮಕ ಚಿಂತನೆ 26%, ಕೌಶಲ್ಯ 04%, ಒಟ್ಟು 100%

1. ನಮ್ಮ ಭಾರತದ ಸಂವಿಧಾನ ಪರಿಚಯ
2. ಪ್ರಸ್ತಾವನೆ
3. ಮೂಲಭೂತ ಹಕ್ಕುಗಳು ಮತ್ತು ಕರ್ತವ್ಯಗಳು
4. ರಾಜ್ಯನೀತಿ ನಿರ್ದೇಶಕ ತತ್ವಗಳು
5. ಕೇಂದ್ರ ಕಾರ್ಯಾಂಗ
6. ಕೇಂದ್ರ ಶಾಸಕಾಂಗ
7. ಸರ್ವೋಚ್ಚ ನ್ಯಾಯಾಲಯ
8. ರಾಜ್ಯ ಕಾರ್ಯಾಂಗ
9. ರಾಜ್ಯ ಶಾಸಕಾಂಗ
10. ಉಚ್ಚ ನ್ಯಾಯಾಲಯ
11. ಸ್ಥಳೀಯ ಸರ್ಕಾರ
12. ಲೋಕಸೇವ ಆಯೋಗಗಳು

ಒಟ್ಟು ಅಂಕಗಳು

ಸೂಚನೆ : ಹೊಂದಿಸಿ ಬರೆಯಿರಿ 5 ಅಂಕದ ಪ್ರಶ್ನೆ

ಕಾರ್ಯಯೋಜನೆಗೆ ಸಂಬಂಧಿಸಿದ ಪ್ರಶ್ನೆ

ವಿಷಯ: ರಾಜ್ಯಶಾಸ್ತ್ರ- ನಮ್ಮ ಭಾರತದ ಸಂವಿಧಾನ

ಬೋಧನ ಅವಧಿ -125 10 ನೇ ತರಗತಿ ಒಟ್ಟು ಅಂಕಗಳು -100

ಪಾಠದ ಸಂಖ್ಯೆ.ಪಾಠದ ಹೆಸರು ಅವಧಿ ಅಂಕ ವಿಂಗಡನೆ ಜ್ಞಾನ 40% ತಿಳುವಳಿಕೆ 30% ವಿಮರ್ಶಾತ್ಮಕ ಚಿಂತನೆ 26% ಕೌಶಲ್ಯ 04% ಒಟ್ಟು

| **ಪಾಠದ ಸಂಖ್ಯೆ** | **ಪಾಠದ ಹೆಸರು** | **ಅವಧಿ** | **ಅಂಕ ವಿಂಗಡನೆ** | **ಜ್ಞಾನ 40%** | | | | **ತಿಳುವಳಿಕೆ 30%** | | | | **ವಿಮರ್ಶಾತ್ಮಕ ಚಿಂತನೆ 26%** | | | | **ಕೌಶಲ್ಯ 04%** | | | | **ಒಟ್ಟು** |
|---|---|---|---|---|---|---|---|---|---|---|---|---|---|---|---|---|---|---|---|---|
| | | | | 1 | 2 | 3 | 4 | 1 | 2 | 3 | 4 | 1 | 2 | 3 | 4 | 1 | 2 | 3 | 4 | |
| | | | | | | | | | | | | | | | | | | | | |

| | | | | | | | | | | | | | | | | | | | | |
|---|---|---|---|---|---|---|---|---|---|---|---|---|---|---|---|---|---|---|---|---|
| 1. | ಭಾರತದ ಸಂವಿಧಾನ ಪರಿಚಯ | 12 | 10 | 3 | | | | | 2 | | | | | 1 | | | | | | 10 |
| 2. | ಪ್ರಸ್ತಾವನೆ | 5 | 3 | 1 | | | | | 1 | | | | | | | | | | | 3 |
| 3. | ಮೂಲಭೂತ ಹಕ್ಕುಗಳು ಮತ್ತು ಕರ್ತವ್ಯಗಳು | 14 | 10 | 4 | | | | | 1 | | | | | | 1 | | | | | 10 |
| 4. | ರಾಜ್ಯನೀತಿ ನಿರ್ದೇಶಕ ತತ್ವಗಳು | 11 | 9 | 2 | | 1 | | | | | | | | | 1 | | | | | 9 |
| 5. | ಕೇಂದ್ರ ಕಾರ್ಯಾಂಗ | 11 | 9 | 2 | | | | | | 1 | | | | | 1 | | | | | 9 |
| 6. | ಕೇಂದ್ರ ಶಾಸಕಾಂಗ | 12 | 10 | 3 | | | | | 2 | | | | | 1 | | | | | | 10 |
| 7. | ಸರ್ವೋಚ್ಚ ನ್ಯಾಯಾಲಯ | 10 | 8 | 4 | | | | | 1 | | | | 1 | | | | | | | 8 |
| 8. | ರಾಜ್ಯ ಕಾರ್ಯಾಂಗ | 8 | 6 | 3 | | | | | | | | | | 1 | | | | | | 6 |
| 9. | ರಾಜ್ಯ ಶಾಸಕಾಂಗ | 12 | 10 | 5+ | | | | 1 | 2 | | | | | | | | | | | 10 |
| 10. | ಉಚ್ಚ ನ್ಯಾಯಾಲಯ | 10 | 8 | 2 | 1 | | | | 2 | | | | | | | | | | | 8 |
| 11. | ಸ್ಥಳೀಯ ಸರ್ಕಾರ | 10 | 9 | 2 | | | | | | | | | | 1 | | | | | 1** | 9 |
| 12. | ಲೋಕಸೇವಾ ಆಯೋಗಗಳು | 10 | 8 | 2 | 1 | | | | 2 | | | | | | | | | | | 8 |
| | **ಒಟ್ಟು** | **125** | **100** | ***429** | **2** | **1** | **-** | **1** | **13** | **1** | **-** | **-** | **1** | **4** | **3** | **-** | **-** | **-** | **1** | **ಪ್ರಶ್ನೆ 56 ಅಂಕ100** |
| | **ಒಟ್ಟು ಅಂಕಗಳು** | | | **40** | | | | **30** | | | | **26** | | | | **04** | | | | **100** |

ಸೂಚನೆ : ಹೊಂದಿಸಿ ಬರೆಯಿರಿ 5 ಅಂಕದ ಪ್ರಶ್ನೆ

ಕಾರ್ಯಯೋಜನೆಗೆ ಸಂಬಂಧಿಸಿದ ಪ್ರಶ್ನೆ

## ಮಾದರಿ ಪ್ರಶ್ನೆ ಪತ್ರಿಕೆ

I. **ಈ ಕೆಳಗಿನ ಬಹು ಆಯ್ಕೆ ಪ್ರಶ್ನೆಗಳಿಗೆ ಸೂಕ್ತವಾದ ಉತ್ತರವನ್ನು ಆರಿಸಿ ಬರೆಯಿರಿ: 15 X 1 = 15**

1. ಭಾರತ ಸಂವಿಧಾನದ ಕರಡು ಸಮಿತಿಯ ಅಧ್ಯಕ್ಷರು.

ಎ) ಡಾ. ಬಾಬು ರಾಜೇಂದ್ರ ಪ್ರಸಾದ್
ಬಿ) ಸಚ್ಚಿದಾನಂದ ಸಿನ್ಹ
ಸಿ) ಸರ್ಧಾರ್ ವಲ್ಲಾಬಾಯಿ ಪಟೇಲ್
ಡಿ) ಡಾ. ಬಿ. ಆರ್. ಅಂಬೇಡ್ಕರ್

2. ಸಂವಿಧಾನ ರಚನಾ ಸಭೆಯಲ್ಲಿ ಧ್ಯೇಯ ನಿರ್ಣಯವನ್ನು ಮಂಡಿಸಿದವರು.

ಎ) ಮಹಾತ್ಮ ಗಾಂಧಿ
ಬಿ) ಡಾ. ಬಿ. ಆರ್. ಅಂಬೇಡ್ಕರ್
ಸಿ) ಜವಹಾರ್ ಲಾಲ್ ನೆಹರು
ಡಿ) ಗೋಪಾಲಸ್ವಾಮಿ ಅಯ್ಯಂಗಾರ್

3. ಡಾ. ಬಿ. ಆರ್. ಅಂಬೇಡ್ಕರ್‌ರವರು ಯಾವ ವಿಧಿಯನ್ನು ಸಂವಿಧಾನದ ಆತ್ಮ ಮತ್ತು ಹೃದಯವಿದ್ದಂತೆ ಎಂದು ವರ್ಣಿಸಿದ್ದಾರೆ.

ಎ) ವಿಧಿ- 31
ಬಿ) ವಿಧಿ- 32
ಸಿ) ವಿಧಿ- 33
ಡಿ) ವಿಧಿ- 34

4. ರಾಜ್ಯನೀತಿ ನಿರ್ದೇಶಕ ತತ್ವಗಳನ್ನು ಯಾವ ಸಂವಿಧಾನದಿಂದ ಎರವಲು ಪಡೆಯಲಾಗಿದೆ.

ಎ) ಅಮೇರಿಕಾ
ಬಿ) ಕೆನಡಾ
ಸಿ) ಐರ್ಲೇಂಡ್
ಡಿ) ಆಸ್ಟ್ರೇಲಿಯ

5. ಈ ಕೆಳಗಿನವುಗಳಲ್ಲಿ ಯಾವ ಹೇಳಿಕೆ ಸರಿಯಾಗಿದೆ.

ಎ) ಲೋಕಸಭೆಯ ಸಭಾಪತಿಯು ಲೋಕಸಭೆಯ ಸದಸ್ಯರಿಂದ ಚುನಾಯಿತರಾಗುತ್ತಾರೆ.
ಬಿ) ಲೋಕಸಭೆಯ ಸಭಾಪತಿಯು ಆಡಳಿತ ಪಕ್ಷದ ಸದಸ್ಯರಿಂದ ಚುನಾಯಿತರಾಗುತ್ತಾರೆ.

ಸಿ) ಲೋಕಸಭೆಯ ಸಭಾಪತಿಯು ಲೋಕಸಭೆ ಮತ್ತು ರಾಜ್ಯಸಭೆಯ ಸದಸ್ಯರುಗಳಿಂದ ಆಯ್ಕೆಯಾಗುತ್ತಾರೆ.
ಡಿ) ಲೋಕಸಭೆಯ ಸಭಾಪತಿಯವರು ರಾಷ್ಟ್ರಪತಿಯವರಿಂದ ನೇಮಕವಾಗುತ್ತಾರೆ.

6. ಸರ್ವೋಚ್ಚ ನ್ಯಾಯಾಲಯದ ಮುಖ್ಯ ನ್ಯಾಯಾಧೀಶರ ನಿವೃತ್ತಿ ವಯಸ್ಸು.

ಎ) 62
ಬಿ) 63
ಸಿ) 64
ಡಿ) 65

7. ಸರ್ವೋಚ್ಚ ನ್ಯಾಯಾಲಯದ ಮೂಲ ಅಧಿಕಾರ ವ್ಯಾಪ್ತಿಯು ಈ ಕೆಳಗಿನ ಯಾವುದನ್ನು ಒಳಗೊಂಡಿಲ್ಲ.

ಎ) ಮೂಲಭೂತ ಹಕ್ಕುಗಳ ಉಲ್ಲಂಘನೆ
ಬಿ) ರಾಷ್ಟ್ರಪತಿ ಚುನಾವಣಾ ವಿವಾದ
ಸಿ) ಸ್ವಾಯತ್ತತಾ ಸಂಸ್ಥೆಯ ವಿವಾದ
ಡಿ) ಅಂತರಾಜ್ಯ ವಿವಾದಗಳು

8. ಹಣಕಾಸು ಮಸೂದೆಯನ್ನು ಮೊದಲು ಈ ಸದನದಲ್ಲಿ ಮಂಡಿಸಬೇಕು.

ಎ) ವಿಧಾನ ಪರಿಷತ್ತು
ಬಿ) ವಿಧಾನ ಸಭೆ
ಸಿ) ರಾಜ್ಯ ಸಭೆ
ಡಿ) ಯಾವುದೂ ಇಲ್ಲ

9. ಇವುಗಳಲ್ಲಿ ಯಾವುದು ರಾಜ್ಯದ ನ್ಯಾಯಾಲಯ.

ಎ) ಲೋಕ ಅದಾಲತ್
ಬಿ) ಸೆಷನ್ ನ್ಯಾಯಾಲಯ
ಸಿ) ಸಿವಿಲ್ ನ್ಯಾಯಾಲಯ
ಡಿ) ಉಚ್ಚ ನ್ಯಾಯಾಲಯ

10. ಯಾವ ವಿಧಿಯನ್ವಯ ಉಚ್ಚ ನ್ಯಾಯಾಲಯವು ಆಜ್ಞೆಗಳನ್ನು ನೀಡುತ್ತದೆ.

ಎ) 32 ನೇ ವಿಧಿ
ಬಿ) 35 ನೇ ವಿಧಿ
ಸಿ) 226 ನೇ ವಿಧಿ
ಡಿ) 28 ನೇ ವಿಧಿ

11. ಕರ್ನಾಟಕ ಲೋಕಸೇವಾ ಆಯೋಗದ ಕೇಂದ್ರ ಕಛೇರಿ ಇರುವ ಸ್ಥಳ.

ಎ) ಬೆಳಗಾವಿ

ಬಿ) ಬೆಂಗಳೂರು
ಸಿ) ಮೈಸೂರು
ಡಿ) ಕಲ್ಬುರ್ಗಿ

12. ಕೇಂದ್ರ ಲೋಕಸೇವಾ ಆಯೋಗದ ಸದಸ್ಯರ ಅಧಿಕಾರವಧಿ.

ಎ) 3 ವರ್ಷಗಳು
ಬಿ) 4 ವರ್ಷಗಳು
ಸಿ) 5 ವರ್ಷಗಳು
ಡಿ) 6 ವರ್ಷಗಳು

13. ಕರ್ನಾಟಕದ ಪಂಚಾಯತ್ ರಾಜ್ ವ್ಯವಸ್ಥೆಯ ಪಿತಾಮಹ.

ಎ) ರಾಮಕೃಷ್ಣ ಹೆಗಡೆ
ಬಿ) ಎಂ. ವೈ. ಘೋರ್ಪಡೆ
ಸಿ) ಅಬ್ದುಲ್ ನಜೀರ್ ಸಾಬ್
ಡಿ) ಎಂ. ಪಿ. ಪ್ರಕಾಶ್

14. ಈ ಕೆಳಗಿನ ಯಾವ ನಗರದಲ್ಲಿ ಮಹಾನಗರ ಪಾಲಿಕೆ ಇರುವುದಿಲ್ಲ.

ಎ) ಕೋಲಾರ
ಬಿ) ಮೈಸೂರು
ಸಿ) ಮಂಗಳೂರು
ಡಿ) ತುಮಕೂರು

15. ರದ್ದು ಪಡಿಸಬಹುದಾದರೂ, ವಿಸರ್ಜಿಸಲಾಗದ ಸದನ.

ಎ) ಲೋಕಸಭೆ
ಬಿ) ರಾಜ್ಯ ಸಭೆ
ಸಿ) ವಿಧಾನಸಭೆ
ಡಿ) ವಿಧಾನ ಪರಿಷತ್ತು

II. **ಖಾಲಿ ಬಿಟ್ಟ ಸ್ಥಳಗಳನ್ನು ಸೂಕ್ತ ಪದಗಳಿಂದ ತುಂಬಿರಿ: 5 X 1 = 5**

16. ________ ದಿನವನ್ನು ಗಣರಾಜ್ಯದಿನವೆಂದು ಪ್ರತಿವರ್ಷ ಆಚರಿಸುತ್ತೇವೆ.

17. ಕರ್ನಾಟಕದಲ್ಲಿ ಶಿಕ್ಷಣ ಹಕ್ಕು ಕಾಯ್ದೆ________ ರಲ್ಲಿ ಅನುಷ್ಠಾನಗೊಂಡಿತು.

18. ರಾಷ್ಟ್ರಪತಿಯ ಅಧಿಕಾರವಧಿ ________ ವರ್ಷಗಳು.

19. ಮಹಾನಗರ ಪಾಲಿಕೆಯ ಸದಸ್ಯರನ್ನು ________ ಎಂದು ಕರೆಯುತ್ತಾರೆ.

20. ಗ್ರಾಮಸಭೆಯನ್ನು ವರ್ಷದಲ್ಲಿ ________ ಭಾರಿ ಕರೆಯಲಾಗುತ್ತದೆ.

III. **‘ಎ’ ಮತ್ತು ‘ಬಿ’ ಪಟ್ಟಿಯಲ್ಲಿರುವ ಅಂಶಗಳನ್ನು ಹೊಂದಿಸಿ ಬರೆಯಿರಿ: 5 X 1 = 5**

21.

| **ಎ ಪಟ್ಟಿ** | **ಬಿ ಪಟ್ಟಿ** |
|---|---|
| 1. ಎ. ವಿಧಾನ ಪರಿಷತ್ತು | a. ವಿಧಾನಸಭೆಯ ಮುಖ್ಯಸ್ಥರು |
| 2. ಬಿ. ವಿಧಾನ ಸಭೆ | b. ಆಡಳಿತ ಪಕ್ಷದ ಮುಖ್ಯಸ್ಥರು |
| 3. ಸಿ. ರಾಜ್ಯಪಾಲರು | c. ನೈಜ ಮುಖ್ಯಸ್ಥರು |
| 4. ಡಿ. ಮುಖ್ಯಮಂತ್ರಿ | d. ನಾಮಮಾತ್ರ ಮುಖ್ಯಸ್ಥರು |
| 5. ಇ. ಸಭಾಪತಿ | e. ಕೆಳಮನೆ |
| | f. ಮೇಲ್ಮನೆ |

**IV. ಈ ಕೆಳಗಿನ ಪ್ರತಿಯೊಂದು ಪ್ರಶ್ನೆಗಳಿಗೂ ಒಂದು ವಾಕ್ಯದಲ್ಲಿ ಉತ್ತರಿಸಿ. 9 X 1 = 9**

22. ಏಕ ಪೌರತ್ವ ಎಂದರೇನು?
23. ಧಾರ್ಮಿಕ ಸ್ವಾತಂತ್ರ್ಯ ಎಂದರೇನು?
24. ಬಂಧೀ ಪ್ರತ್ಯಕ್ಷೀಕರಣ ಎಂದರೇನು?
25. ಉದಾರವಾದಿ ತತ್ವಗಳೆಂದರೇನು?
26. ಪ್ರಧಾನ ಮಂತ್ರಿಯನ್ನು ಯಾರು ನೇಮಕ ಮಾಡುತ್ತಾರೆ?
27. ಕೋರಂ ಎಂದರೇನು?
28. ಲೋಕ ಸಭೆಯ ಚುನಾಯಿತ ಸದಸ್ಯರ ಸಂಖ್ಯೆ ಎಷ್ಟು?
29. ಸರ್ವೋಚ್ಚ ನ್ಯಾಯಾಲಯ ಯಾವಾಗ ಸ್ಥಾಪನೆಯಾಯಿತು?
30. ಸರ್ವೋಚ್ಚ ನ್ಯಾಯಾಲಯದ ಮುಖ್ಯ ನ್ಯಾಯಾಧೀಶರನ್ನು ಯಾರು ನೇಮಕ ಮಾಡುತ್ತಾರೆ?

**V. ಈ ಕೆಳಗಿನ ಪ್ರತಿಯೊಂದು ಪ್ರಶ್ನೆಗಳಿಗೂ ಎರಡು ಅಥವಾ ಮೂರು ವಾಕ್ಯಗಳಲ್ಲಿ ಉತ್ತರಿಸಿ: 16 X 2 = 32**

31. ಸಾರ್ವತ್ರಿಕ ವಯಸ್ಕ ಮತದಾನ ಪದ್ಧತಿ ಎಂದರೇನು?
32. ನಮ್ಮ ಸಂವಿಧಾನವನ್ನು ಬೃಹತ್ ಸಂವಿಧಾನ ಎಂದು ಕರೆಯಲು ಕಾರಣವೇನು?
33. ಪ್ರಸ್ತಾವನೆಯನ್ನು ವ್ಯಾಖ್ಯಾನಿಸಿ.
34. ಶೋಷಣೆಯ ವಿರುದ್ಧದ ಹಕ್ಕುಗಳನ್ನು ತಿಳಿಸಿ.
35. ಲೋಕಸಭೆಯ ರಚನೆಯನ್ನು ತಿಳಿಸಿ.

36. ರಾಷ್ಟ್ರಾಧ್ಯಕ್ಷರು ರಾಜ್ಯಸಭೆಗೆ ಯಾವ ಯಾವ ಕ್ಷೇತ್ರಗಳಲ್ಲಿ ವಿಶಿಷ್ಟ ಸಾಧನೆ ಮಾಡಿದವರನ್ನು ನೇಮಕ ಮಾಡುತ್ತಾರೆ?

37. ಮೂಲ ಅಧಿಕಾರ ವ್ಯಾಪ್ತಿ ಎಂದರೇನು?

38. ನ್ಯಾಯಾಂಗವು ಸಂವಿಧಾನದ ರಕ್ಷಕ ಹೇಗೆ?

39. ವಿಧಾನ ಸಭೆಯ ಸದಸ್ಯರಾಗಲು ಇರಬೇಕಾದ ಅರ್ಹತೆಗಳಾವುವು?

40. ಕರ್ನಾಟಕ ಶಾಸಕಾಂಗದ ಎರಡು ಸದನಗಳನ್ನು ಹೆಸರಿಸಿ.

41. ನ್ಯಾಯಿಕ ವಿಮರ್ಶೆ ಎಂದರೇನು?

42. ಗ್ರಾಹಕ ವ್ಯಾಜ್ಯ ತೀರ್ಮಾನ ವೇದಿಕೆಯ ಅರ್ಥವನ್ನು ತಿಳಿಸಿ.

43. ಕಂದಾಯ ನ್ಯಾಯಾಲಯಗಳ ಶ್ರೇಣಿಯನ್ನು ಬರೆಯಿರಿ.

44. ಜಂಟಿ ಲೋಕಸೇವಾ ಆಯೋಗ ಎಂದರೇನು?

45. ಕೇಂದ್ರ ಲೋಕಸೇವಾ ಆಯೋಗದ ರಚನೆಯನ್ನು ತಿಳಿಸಿ.

46. ಕರ್ನಾಟಕ ಲೋಕಸೇವಾ ಆಯೋಗದ 2 ಕಾರ್ಯಗಳನ್ನು ಬರೆಯಿರಿ.

**VI. ಈ ಕೆಳಗಿನ ಪ್ರತಿಯೊಂದು ಪ್ರಶ್ನೆಗಳಿಗೂ ಆರು ವಾಕ್ಯಗಳಲ್ಲಿ ಉತ್ತರಿಸಿ: 6 X 3 = 18**

47. ಭಾರತದ ಸಂವಿಧಾನವನ್ನು ಎರವಲು ಸಂವಿಧಾನವೆನ್ನಲು ಕಾರಣವೇನು?

48. ರಾಜ್ಯನೀತಿ ನಿರ್ದೇಶಕ ತತ್ವಗಳ ಪ್ರಮುಖ ಲಕ್ಷಣಗಳನ್ನು ತಿಳಿಸಿ.

49. ರಾಷ್ಟ್ರಪತಿಯವರ ತುರ್ತುಪರಿಸ್ಥಿತಿಯ ಅಧಿಕಾರಗಳನ್ನು ತಿಳಿಸಿ.

50. ರಾಜ್ಯಸಭೆಯು ಶಾಶ್ವತ ಸದನವಾಗಿದೆ ಹೇಗೆ?

51. ವಿವೇಚನ ಅಧಿಕಾರಗಳು ರಾಜ್ಯಪಾಲರ ಸ್ಥಾನಮಾನವನ್ನು ಹೆಚ್ಚಿಸಿವೆ ಸಮರ್ಥಿಸಿ.

52. ಗ್ರಾಮಸಭೆಯು ಪ್ರತ್ಯಕ್ಷ ಪ್ರಜಾಪ್ರಭುತ್ವದ ಪ್ರತಿರೂಪವಾಗಿದೆ ಸಮರ್ಥಿಸಿ.

**VII. ಈ ಕೆಳಗಿನ ಪ್ರತಿಯೊಂದು ಪ್ರಶ್ನೆಗಳಿಗೂ ಎಂಟು ವಾಕ್ಯಗಳಲ್ಲಿ ಉತ್ತರಿಸಿ: 4 X 4 = 16**

53. ಮೂಲಭೂತ ಹಕ್ಕುಗಳು ಮತ್ತು ಕರ್ತವ್ಯಗಳು 'ಒಂದೇ ನಾಣ್ಯದ ಎರಡು ಮುಖಗಳು' ಈ ಹೇಳಿಕೆಯನ್ನು ಸಮರ್ಥಿಸಿ.

54. ರಾಜ್ಯನೀತಿ ನಿರ್ದೇಶಕ ತತ್ವಗಳನು ಸರಿಯಾಗಿ ಅನುಷ್ಠಾನಗೊಳಿಸಲಾಗಿದೆಯೇ? ಉದಾಹರಣೆಗಳೊಂದಿಗೆ ವಿವರಿಸಿ.

55. ಪ್ರಧಾನಮಂತ್ರಿಯು 'ಮಂತ್ರಿಮಂಡಲದ ಕೇಂದ್ರ ಬಿಂದು' ವಾಗಿದ್ದಾರೆ ಸಮರ್ಥಿಸಿ.

56. ಪಂಚಾಯತ್ ರಾಜ್ ವ್ಯವಸ್ಥೆಯೇ ಪ್ರಜಾಪ್ರಭುತ್ವದ ಅಡಿಗಲ್ಲು ವಿಮರ್ಶಿಸಿ.

ಅಥವಾ ಸ್ಥಳೀಯ ಸರ್ಕಾರಗಳಲ್ಲಿ ವಿಭಿನ್ನ ಸಾಮರ್ಥ್ಯವುಳ್ಳವರಿಗೆ/ ಅಂಗವಿಕಲರಿಗೆ ಇರುವ ಸವಲತ್ತುಗಳು ಮತ್ತು ಸವಾಲುಗಳನ್ನು ಕುರಿತು ಚರ್ಚಿಸಿ.